ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರಪುಸ್ತಕಮಾಲೆ—೧೦

# ಪಂಪ

ತೀ. ನಂ. ಶ್ರೀಕಂಠಯ್ಯ, ಎಂ.ಎ.

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

ಮೈಸೂರು

೧೯೩೯

# ಮುನ್ನುಡಿ

ಮೈಸೂರು ವಿಶ್ವವಿದ್ಯಾನಿಲಯದ ಚಾನ್ಸಲರವರಾದ ಆಳುವ ಮಹಾಸ್ವಾಮಿಯವರು ಮೊದಲನೆಯ ಸೆನೆಟ್ ಸಭೆಯ ಪ್ರಾರಂಭೋತ್ಸವದ ಭಾಷಣದಲ್ಲಿಯೂ, ಪುನಃ ಮೊದಲನೆಯ ಕಾನ್ವೊಕೇಷನ್ ಮಹೋತ್ಸವದ ಭಾಷಣದಲ್ಲಿಯೂ ವಿಶ್ವವಿದ್ಯಾನಿಲಯದ ಪಾಲಿಗೆ ಹಲವು ಕರ್ತವ್ಯಗಳನ್ನು ಅಪ್ಪಣೆ ಮಾಡಿದರು. ಅವುಗಳಲ್ಲಿ ವಿಶೇಷವಾದವು ಇವೆರಡು: ಒಳ್ಳೆಯ ಕನ್ನಡದಲ್ಲಿ ಬರೆದ ಪುಸ್ತಕಗಳ ಪ್ರಕಟನೆ, ಹಾಗೂ ಕನ್ನಡ ಸಾಹಿತ್ಯಕ್ಕೆ ಪ್ರೋತ್ಸಾಹ. ಮತ್ತು ಶ್ರೀಮನ್ಮಹಾರಾಜರವರ ಪ್ರಜೆಗಳಲ್ಲಿ ಯಾರು ಕಾರಣಾಂತರಗಳಿಂದ ಕ್ರಮಬದ್ಧವಾದ ಶಿಕ್ಷಣಶಿಸ್ತುಗಳಲ್ಲಿ ಭಾಗವಹಿಸಿ ಪರೀಕ್ಷೆಗಳಿಗೆ ಕೂಡಲು ಶಕ್ತರಲ್ಲವೋ ಅಂಥವರಲ್ಲಿ ಜ್ಞಾನಪ್ರಸಾರ ಮಾಡುವುದು; ಅಲ್ಲದೆ ಮೈಸೂರು, ಬೆಂಗಳೂರು ಈ ಎರಡು ಹಿರಿಯ ಪಟ್ಟಣಗಳಲ್ಲಿ ದೊರಕುವ ವಿದ್ಯಾಭ್ಯಾಸಾನುಕೂಲ್ಯಗಳನ್ನು ಪಡೆದಿಲ್ಲದ, ಸಂಸ್ಥಾನದ ದೂರಪ್ರದೇಶಗಳಲ್ಲಿ ವಾಸಿಸುವ ಜನರಲ್ಲಿ ಉಚ್ಚ ವರ್ಗದ ಸಂಸ್ಕೃತಿಯನ್ನು ಹರಡುವುದು.

ಈ ಇಪ್ಪತ್ತುಮೂರು ವರ್ಷಗಳಿಂದಲೂ ವಿಶ್ವವಿದ್ಯಾನಿಲಯವು ಈ ಎರಡು ಮುಖ್ಯ ಧ್ಯೇಯಗಳನ್ನು ತನ್ನ ಮುಂದೆ ತಪ್ಪದೆ ನಿಲ್ಲಿಸಿಕೊಂಡಿದೆ. ಅದರ ಕನ್ನಡ ಪ್ರಕಟನ ಶಾಖೆಯು ಕೆಲವು ಪ್ರಸಿದ್ಧ ಹಳಗನ್ನಡ ಕಾವ್ಯಗಳನ್ನು ಎಚ್ಚರಿಕೆಯಿಂದ ಪರಿಷ್ಕರಿಸಿ ಅಚ್ಚು ಹಾಕಿಸಿದೆ; ಅಲ್ಲದೆ, ಸಾಹಿತ್ಯ ವಿಜ್ಞಾನ ವಿಷಯಗಳನ್ನು ಕುರಿತ ಕೆಲವು ಲಘು ಪುಸ್ತಕಗಳನ್ನೂ ಹೊರತಂದಿದೆ. ಪ್ರಚಾರೋಪನ್ಯಾಸ ಸಮಿತಿಯವರು ಸಂಸ್ಥಾನದ ಎಲ್ಲ ಭಾಗಗಳ ಅನೇಕ ಕೇಂದ್ರಗಳಲ್ಲಿ ಹೆಚ್ಚಾಗಿ ಕನ್ನಡದಲ್ಲಿಯೇ ಉಪನ್ಯಾಸಗಳನ್ನು ಏರ್ಪಡಿಸುತ್ತಿದ್ದಾರೆ.

ಇತ್ತೀಚೆಗೆ ಒಂದು ಫಲದಾಯಕವಾದ ಕಾರ್ಯಕ್ರಮ ಬೆಳೆದು ಬರುತ್ತಿದೆ. ವಿಷಯ ಒಂದೊಂದಕ್ಕೆ ಒಂದೊಂದರಂತೆ ಬಿಡಿ ಉಪನ್ಯಾಸ

ವನ್ನು ಕೊಡಿಸುವುದರ ಜೊತೆಗೆ, ವಿಶ್ವವಿದ್ಯಾನಿಲಯದ ಅಧ್ಯಾಪಕ ಸಂಘದ ಸಹಕಾರದಿಂದ ಸಂಸ್ಕೃತಿ ಸಪ್ತಾಹಗಳೆಂದು ಈಗಾಗಲೇ ಕರೆಯಲ್ಪಡುತ್ತಿರುವ ಉಪನ್ಯಾಸಮಾಲೆಗಳನ್ನು ಇಡಿಸಲಾಗುತ್ತಿದೆ. ಒಂದೇ ಊರಿನಲ್ಲಿ ಐದಾರು ದಿನ ಭಾಷಣ ಕಾವ್ಯವಾಚನ ಸಂಗೀತಾದಿಗಳು ಜರುಗುತ್ತವೆ; ಉಪನ್ಯಾಸಗಳು ಸಾಹಿತ್ಯ ವಿಜ್ಞಾನ ಸಮಾಜವೆಲ್ಲಕ್ಕೂ ಸಂಬಂಧಿಸಿರುತ್ತವೆ. ಈ ಸಪ್ತಾಹಗಳು ನೆರವೇರಿದ ದೊಡ್ಡಬಳ್ಳಾಪುರ, ದಾವಣಗೆರೆ, ಕೋಲಾರ ಮುಂತಾದ ಎಲ್ಲ ಕಡೆಗಳಿಂದಲೂ ಅವಕ್ಕೆ ಬಹಳ ಮನ್ನಣೆ ದೊರೆತಿದೆ.

ಈಗ ಅತಿ ಹೊಸದಾದ ಏರ್ಪಾಡಾವುದೆಂದರೆ: ಒಂದೆರಡು ಊರುಗಳನ್ನು ಆರಿಸಿಕೊಂಡು, ಅಲ್ಲಿಗೆ ಒಂದು ವರ್ಷದಲ್ಲಿ ಹಲವು ಬಾರಿ ಹೋಗಿ, ಕೆಲವು ವಿಷಯಗಳಲ್ಲಿ ಒಂದೊಂದನ್ನೂ ಕುರಿತು ನಾಲ್ಕಾರು ಉಪನ್ಯಾಸಗಳನ್ನು ಹೇಳುವ ಯೋಜನೆ. ಅದರಿಂದ ಆ ಊರುಗಳ ಜನರಿಗೆ ಅನಲ್ಪಕಾಲ ಎಡೆಬಿಡದೆ ಜ್ಞಾನಬೋಧೆ ಸಿಕ್ಕುವುದು. ಪ್ರತ್ಯಕ್ಷ ಕೇಳಿ ಉಪಯೋಗ ಪಡೆದ ಸಭಿಕರ ಗುಂಪಿನಿಂದ ಆಚೆಗೂ ಕೂಡ ಈ ಭಾಷಣಮಾಲೆಗಳ ಪ್ರಯೋಜನ ಹರಡಲೆಂಬ ಉದ್ದೇಶದಿಂದ ಅವುಗಳನ್ನು ಈ ರೀತಿ ಚಿಕ್ಕ ಹೊತ್ತಗೆಗಳಾಗಿ ಪ್ರಕಟಿಸಿದೆ.

ನಮ್ಮ ಘನ ಪ್ರಭುಗಳವರು ನಮ್ಮ ವಿಶ್ವವಿದ್ಯಾನಿಲಯಕ್ಕೆ ಎರಡು ಪವಿತ್ರ ಕರ್ತವ್ಯಗಳನ್ನು ನೇಮಿಸಿರುವರಷ್ಟೆ: ಸುಲಭ ಸಮಂಜಸ ಕನ್ನಡದಲ್ಲಿ ರಚಿಸಿದ ಗ್ರಂಥಗಳ ಪ್ರಕಟನೆ; ಜನತೆಯಲ್ಲಿ ಉತ್ತಮ ಬಗೆಯ ಸಂಸ್ಕೃತಿಯ ಪ್ರಸಾರ. ಆ ಎರಡು ಕರ್ತವ್ಯಗಳನ್ನೂ ಈ ಮಾರ್ಗವಾಗಿ ಒಂದೇ ಸಾರಿ ಸಾಧಿಸಬಹುದೆಂಬುದೇ ಹೀಗೆ ಉಪನ್ಯಾಸಗಳನ್ನು ಕೊಟ್ಟು, ಲಘು ಪುಸ್ತಕಗಳನ್ನು ಸಿದ್ಧಮಾಡಿದವರ ನಿರೀಕ್ಷೆ ಮತ್ತು ಹೆಬ್ಬಯಕೆ.

ವಿಶ್ವವಿದ್ಯಾನಿಲಯ, ಮೈಸೂರು,
೨೯—೫—೧೯೩೯.

ಎನ್. ಎಸ್. ಸುಬ್ಬರಾವ್.

# ಅರಿಕೆ

ಬೇಲೂರಿಗೋ ಹಳೆಯಬೀಡಿಗೋ ಒಬ್ಬರನ್ನು ಕರೆದುಕೊಂಡು ಹೋಗಿ, ಒಂದೇ ಘಂಟೆಯ ಕಾಲದಲ್ಲಿ ದೇವಾಲಯದ ದರ್ಶನಮಾಡಿಸಲು ಒಪ್ಪಿಕೊಂಡವನ ಅವಸ್ಥೆಯನ್ನು ಸುಲಭವಾಗಿ ಊಹಿಸಬಹುದು. ಗುಡಿಯನ್ನು ಬೇಗಬೇಗ ಒಂದು ಸುತ್ತುಹಾಕಿಸಿ, ದೇವರಿಗೆ ಒಂದಿಷ್ಟು ಮಂಗಳಾರತಿ ಮಾಡಿಸಿ, ಈ ಮದನಿಕಾ ವಿಗ್ರಹದ ನಿಲವನ್ನೋ ಆ ಕಂಬದ ಮಾಟವನ್ನೋ ಮೆಚ್ಚಿ ಮೆಚ್ಚಿ ತೋರಿಸುವಷ್ಟರಲ್ಲೇ ಘಂಟೆ ಹಾರಿಹೋಗಿಬಿಡುತ್ತದೆ. ನೋಡಲು ಬಂದವರ ಮಾತು ಹಾಗಿರಲಿ; ತೋರಿಸಲು ನಿಂತವನಿಗೇ ಸ್ವಲ್ಪವೂ ತೃಪ್ತಿಯಿಲ್ಲ. ಪಂಪಮಹಾಕವಿಯ ಪರಿಚಯವನ್ನು ಅಂಗೈಯಗಲದ ಅರುವತ್ತುನಾಲ್ಕು ಪುಟಗಳಲ್ಲಿ ಮಾಡಿಕೊಡಲು ಹೊರಟು ಇದೇ ಸಂಕಟವನ್ನು ನಾನು ಪಡಬೇಕಾಯಿತು. ಪಂಪನ ಮಹತ್ತ್ವವನ್ನೂ ಅವನ ಕಾವ್ಯಗಳ ಬಗೆಬಗೆಯ ಸೊಗಸನ್ನೂ ವಿಶದವಾಗಿ ನಿರೂಪಿಸಲು ಇಲ್ಲಿ ಎಷ್ಟುಮಾತ್ರಕ್ಕೂ ಸಾಧ್ಯವಾಗಿಲ್ಲ; ಆ ಆಸೆಯನ್ನೇ ನಾನು ಇಟ್ಟುಕೊಳ್ಳುವಂತಿರಲಿಲ್ಲ. ಈಗಿನ ಕಾಲದಲ್ಲಿ, ಸಿನಿಮಾ ಮಂದಿರಕ್ಕೆ ಒಂದು ಚಿತ್ರಪಟವನ್ನು ತರಿಸುವ ಮುಂಚೆ, ಅದರ ಮೊದಲ ರುಚಿಯನ್ನು ಕಾಣಿಸಿ ಪ್ರೇಕ್ಷಕರಲ್ಲಿ ಕುತೂಹಲವನ್ನು ಹುಟ್ಟಿಸುವುದಕ್ಕಾಗಿ 'ಟ್ರೇಲರ್' ಎಂಬ ಮುಂಗಾಣಿಕೆಯ ಚಿತ್ರವನ್ನು ತೋರಿಸುತ್ತಾರಷ್ಟೆ. ಪಂಪನ ಕಾವ್ಯಗಳಿಗೆ ಈ ಬಗೆಯ ಪ್ರವೇಶವು ನನ್ನ ಪುಸ್ತಕದಿಂದ ಉಂಟಾದರೆ ಸಾಕು.

ಹಳಗನ್ನಡದ ಬಳಕೆಯಿಲ್ಲದವರಿಗೆ ಪಂಪನ ಬರೆವಣಿಗೆ ಸುಲಭವಾಗಿ ಅರ್ಥವಾಗುವುದಿಲ್ಲ. ಪದ್ಯಗಳಲ್ಲಂತೂ ಸಂಧಿಯ ನಿಯಮದಂತೆ ಮಾತುಗಳೆಲ್ಲ ಒಂದಕ್ಕೊಂದು ಹೆಣೆದು

ಕೊಂಡಿರುವುದರಿಂದ ಪದವಿಭಾಗವೇ ಮೊದಲು ಕಷ್ಟಕೊಡುತ್ತದೆ. ಈ ಪುಸ್ತಕದಲ್ಲಿ ಪಂಪನ ಕಾವ್ಯದಿಂದ ಉದಾಹರಿಸಿರುವ ಭಾಗಗಳನ್ನೆಲ್ಲಾ ಆದಷ್ಟುಮಟ್ಟಿಗೆ ಸಂಧಿ ಬಿಡಿಸಿ ವಿರಾಮ ಚಿಹ್ನೆಗಳನ್ನು ಉಪಯೋಗಿಸಿ ಅಚ್ಚುಮಾಡಿದೆ. ಈ ಕಾವ್ಯ ಭಾಗಗಳ ಸಾರವನ್ನು ಅಲ್ಲಲ್ಲೇ ಕೆಲವು ವಾಕ್ಯಗಳಲ್ಲಿ ಸೂಚಿಸುವುದರ ಮೂಲಕ ಅವುಗಳ ಅರ್ಥವನ್ನು ವಿಶದಪಡಿಸಲು ಪ್ರಯತ್ನ ಮಾಡಿದೆ. ಕೆಲವು ಕಠಿನ ಪದಗಳ ಅರ್ಥವನ್ನೂ ಕೊಟ್ಟಿದೆ. ಇದೆಲ್ಲದರಿಂದ, ವಾಚಕರಿಗೆ ಪಂಪನ ಕನ್ನಡವು ಹೆಚ್ಚು ಶ್ರಮವಿಲ್ಲದೆ ತಿಳಿಯುವಂತಾಗಲಿ.

ತಿರುಮಕೂಡಲುನರಸೀಪುರದಲ್ಲೂ ಹಾಸನದಲ್ಲೂ ಪಂಪನನ್ನು ಕುರಿತು ನಾನು ಕೊಟ್ಟ ಉಪನ್ಯಾಸಗಳೇ ಈ ಪುಸ್ತಕಕ್ಕೆ ತಳಹದಿ. ಇದನ್ನು ಬರೆಯುವಂತೆ ನನ್ನನ್ನು ಪ್ರೋತ್ಸಾಹಿಸಿ, ಬರೆದದ್ದನ್ನು ಪರಿಷ್ಕರಿಸಿ ಉಪಕಾರಮಾಡಿದ ಸಂಪಾದಕ ಮಂಡಲಿಯ ನನ್ನ ಮಿತ್ರರಿಗೆ, ಅದರಲ್ಲೂ ಶ್ರೀಮಾನ್ ಜಿ. ಹನುಮಂತರಾಯರಿಗೆ, ನನ್ನ ಕೃತಜ್ಞತೆಯನ್ನು ಈ ಮೂಲಕ ಸಲ್ಲಿಸುತ್ತೇನೆ.

ಪಂಪನ ಮೇಲೆ ಲೇಖನಗಳೂ ಗ್ರಂಥಗಳೂ ಈ ಮೊದಲೇ ಹೊರಬಿದ್ದಿವೆ. ವಾಚಕರ ಸೌಕರ್ಯಕ್ಕಾಗಿ ಅವುಗಳ ಸಣ್ಣ ಪಟ್ಟಿಯೊಂದನ್ನು ಮುಂದೆ ಕೊಟ್ಟಿದೆ. ಈ ಪುಸ್ತಕದ ರಚನೆಯಲ್ಲಿ ಅವುಗಳಿಂದ ನಾನು ಪಡೆದಿರುವ ಸಹಾಯವನ್ನು ಇಲ್ಲಿ ಹೃತ್ಪೂರ್ವಕವಾಗಿ ಸ್ಮರಿಸುತ್ತೇನೆ.

ಮಹಾರಾಜರವರ ಕಾಲೇಜು,
ಮೈಸೂರು,
ತಾ॥ ೧೫-೧೨-೧೯೩೯.

ತೀ. ನಂ. ಶ್ರೀ.

# ಮುಂದೆ ಓದಲು ಸೂಚನೆ

**ಪಂಪನ ಕಾವ್ಯಗಳು** —

‘ ಆದಿಪುರಾಣಂ ’ (ಮೈಸೂರು ಓರಿಯೆಂಟಲ್ ಲೈಬ್ರರಿ)

‘ ಪಂಪಭಾರತಂ ಎಂಬ ವಿಕ್ರಮಾರ್ಜುನವಿಜಯಂ ’
(ಕನ್ನಡ ಸಾಹಿತ್ಯ ಪರಿಷತ್ತು)

**ವಿಮರ್ಶೆ, ಇತ್ಯಾದಿ**—

ಶ್ರೀ|| ಗಳಾದ—

ಎಸ್. ವಿ. ರಂಗಣ್ಣ : ‘ ಪಂಪಭಾರತ ’
(ಪರಿಷತ್ಪತ್ರಿಕೆ, XV. ೩)

ಎನ್. ಅನಂತರಂಗಾಚಾರ್ : ‘ ಪಂಪಮಹಾಕವಿ ’
(ಪರಿಷತ್ಪತ್ರಿಕೆ, XV. ೪)

ಎ. ಆರ್. ಕೃ. ಮತ್ತು ಬಿ. ವೆಂ. :
‘ ಪರಭಣಿಯ ತಾಮ್ರಶಾಸನ ಮತ್ತು ಪಂಪಭಾರತ ’
(ಪ್ರಬುದ್ಧ ಕರ್ಣಾಟಕ, XV. ೧)

ಟಿ. ಎಸ್. ವೆಂ. : ‘ ಪಂಪಭಾರತ ’
(ಪ್ರಬುದ್ಧ ಕರ್ಣಾಟಕ, XV. ೪)

ಎಂ. ಗೋವಿಂದ ಪೈ : ‘ ಪಂಪನ ದೇಶಕಾಲಗಳ ವಿಚಾರ ’ (ಭಾರತಿ, ಸಂ. i)

“ ಶ್ರೀ ” : ‘ ಕವಿ ಕಂಡ ನಾಡು ’ (ಕನ್ನಡ ನುಡಿ, i. ೫)

ಮುಳಿಯ ತಿಮ್ಮಪ್ಪಯ್ಯ : ‘ ನಾಡೋಜ ಪಂಪ ’
‘ ಆದಿಪುರಾಣಸಂಗ್ರಹ ’
‘ ಸಮಸ್ತಭಾರತಸಾರ ’

---

# ವಿಷಯಸೂಚಿಕೆ

# ಪಂಪ

## ೧. ಪರಿಚಯ

ಸುಮಾರು ಸಾವಿರ ವರ್ಷಗಳ ಹಿಂದೆ ಹೆಸರುಗೊಂಡ ಕವಿಯೊಬ್ಬನು ಕನ್ನಡದ 'ಕವಿಕುಲಗುರು'ವಾಗಿ ನಿಂತಿದ್ದಾನೆ. ಅಂದಿನಿಂದ ಇಂದಿನವರೆಗೆ ಅವನ ಕವಿತೆಯನ್ನು ಓದಿ ಮೆಚ್ಚಿದ ರಸಿಕರ ಸಂಖ್ಯೆ ಹಾಗಿರಲಿ; ಆ ಅರಕೆಯಿಲ್ಲದ ಭಂಡಾರದಿಂದ ಕಂಡಂತೆ ಕಾಣದಂತೆ ಭಾವಗಳನ್ನೂ ಉಕ್ತಿಗಳನ್ನೂ ಸಂಗ್ರಹಿಸಿ ತಮ್ಮ ಕಾವ್ಯಗಳನ್ನು ತುಂಬಿಸಿಕೊಂಡ ದೊಡ್ಡ ಪುಟ್ಟ ಕವಿಗಳೇ ಎಷ್ಟೋ ಮಂದಿ ಆಗಿಹೋದರು. ವಿಮರ್ಶೆಯ ತಕ್ಕಡಿಯಲ್ಲಿಟ್ಟು ತೂಗಿ ಹಿಂದಿನದಕ್ಕೆಲ್ಲ ಹೊಸ ಬೆಲೆಯನ್ನು ಕಟ್ಟುತ್ತಿರುವ ಈಗಿನ ಕಾಲದಲ್ಲಿ ಕೂಡ ಈತನ ಸ್ಥಾನ ಮಹತ್ತ್ವಗಳಿಗೆ ಕುಂದುಕ ಬಂದಿಲ್ಲ. 'ಪಸರಿಪ ಕನ್ನಡಕ್ಕೊಡೆಯ ನೊರ್ವನೆ ಸತ್ಕವಿ ಪಂಪನಾವಗಂ' ಎಂದು ನಾಗರಾಜನೆಂಬ ಕವಿ ಸುಮಾರು ಆರುನೂರು ವರ್ಷಗಳ ಕೆಳಗೆ ಸಾರಿದನು; ಅದೇ ಈಹೊತ್ತಿಗೂ ಮಾರ್ದನಿಗೊಡುತ್ತಿದೆ.

ಇಷ್ಟು ಪ್ರಭಾವಶಾಲಿಯಾದ ಮಹಾಕವಿಯ ಕೃತಿಗಳನ್ನು ಸವಿನೋಡುವುದಕ್ಕೆ ಪೀಠಿಕೆಯಾಗಿ ಅವನ ಜೀವನದ ಪರಿಚಯವನ್ನು ಒಂದಿಷ್ಟು ಮಾಡಿಕೊಳ್ಳಬೇಕೆಂಬ ಕುತೂಹಲ ಹುಟ್ಟುವುದು ಸಹಜ. ನಮ್ಮ ಸುದೈವದಿಂದ ಈ ವಿಷಯದಲ್ಲಿ ಪಂಪನೇ ಸಹಾಯವನ್ನು ಒದಗಿಸಿದ್ದಾನೆ. ಅವನು ಬಿಟ್ಟುಹೋಗಿರುವ ಕಾವ್ಯಗಳು ಎರಡು. ಇವೆರಡರಲ್ಲೂ—ಮುಖ್ಯವಾಗಿ, 'ಆದಿಪುರಾಣ'ದ ಮೊದಲಲ್ಲೂ 'ವಿಕ್ರಮಾರ್ಜುನವಿಜಯ'ದ ಕೊನೆಯಲ್ಲೂ—ಅವನು ಸ್ವವಿಷಯವನ್ನು ಹೇಳಿಕೊಂಡಿದ್ದಾನೆ; ಒಂದೊಂದು ಸಲ ಸಂಕೋಚದ ಎಲ್ಲೆಯನ್ನು ಮೀರಿ

ಹೇಳಿಕೊಂಡಿದ್ದಾನೆ. ಇದರ ಜೊತೆಗೆ, ಕಾವ್ಯದ ರಸ ಉಕ್ಕಿ ಉಕ್ಕಿ ಬಂದ ಕಡೆ, ಒಂದೇ ಅಭಿಪ್ರಾಯ ಮತ್ತೆ ಮತ್ತೆ ತಲೆ ಹಾಕಿದ ಕಡೆ, ಕವಿಯ ಮನೋಧರ್ಮದ ಮುದ್ರೆ ಬಿದ್ದೇ ಇರುತ್ತದೆ. ಇದೆಲ್ಲದರ ಸಹಾಯದಿಂದ ಪಂಪನ ಕುಲ ಶೀಲ ದೇಶ ಕಾಲಗಳ ಪರಿಚಯವನ್ನು ತಕ್ಕಮಟ್ಟಿಗೆ ಮಾಡಿಕೊಳ್ಳಬಹುದು.

ಪಂಪನ ಹಿರಿಯರು ಮೊದಲಿಗೆ ವೈದಿಕರು. ಅವನ ಮುತ್ತಜ್ಜನ ತಂದೆಯಾದ ಮಾಧವಸೋಮಯಾಜಿ ಮಂತ್ರಸಿದ್ಧಿಯನ್ನು ಪಡೆದು ದೊಡ್ಡ ಯಾಗಗಳನ್ನು ಮಾಡಿ ಪ್ರಸಿದ್ಧಿ ಹೊಂದಿದವನು. ಈತನ ಮಹಿಮೆಯಲ್ಲಿ ಪಂಪನಿಗೆ ಗೌರವ; ಆದರೆ ತನ್ನ ಯಾಗಧೂಮದಿಂದ ಅವನು ಕೀರ್ತಿಗೆ ಕಪ್ಪು ಹತ್ತಿಸಿಕೊಂಡನೆಂದು ವ್ಯಸನವೂ ಆಗಿದೆ. ಈ ಮಾಧವಸೋಮಯಾಜಿಯ ಸಂತತಿಯಲ್ಲಿ ಹುಟ್ಟಿದ ಅಭಿರಾಮದೇವರಾಯನೇ ಪಂಪನ ತಂದೆ. ಈತನು ವೈದಿಕಧರ್ಮವನ್ನು ಬಿಟ್ಟು ಜೈನಧರ್ಮವನ್ನು ಅವಲಂಬಿಸಿದ್ದಕ್ಕೆ ಕಾರಣವನ್ನು ಪಂಪನು ಹೀಗೆ ಹೇಳಿದ್ದಾನೆ:

ಜಾತಿಯೊಳೆಲ್ಲಮುತ್ತಮದ ಜಾತಿಯ ವಿಪ್ರಕುಲಂಗೆ ನಂಬಲ್- ಏ-
ಮಾತೊ ಜಿನೇಂದ್ರಧರ್ಮಮೆ ವಲಂ[1] ದೊರೆ ಧರ್ಮದೊಳೆಂದು ನಂಬಿ ತ-
ಜ್ಜಾತಿಯನುತ್ತರೋತ್ತರಮೆ[2] ಮಾಡಿ ನೆಗಳ್ಚಿದನ್- ಇಂತಿರೆ- ಆತ್ಮವಿ-
ಖ್ಯಾತಿಯನಾತನ್-. ಆತನ ಮಗಂ ನೆಗಳ್ದಂ[3] ಕವಿತಾಗುಣಾರ್ಣವಂ.

ಪಂಪನಿಗೆ ತನ್ನ ಬ್ರಾಹ್ಮಣಜಾತಿಯಲ್ಲಿ ಹೆಮ್ಮೆಯುಂಟು; ಇಂಥ ಉತ್ತಮ ಜಾತಿಯಲ್ಲಿ ಹುಟ್ಟಿದವನು ನಂಬುವುದಕ್ಕೆ ಯೋಗ್ಯವಾದ ಉತ್ತಮ ಧರ್ಮವೆಂದರೆ ಜೀವದಯೆಯಿಂದ

---

[1] ವಲಂ—ನಿಶ್ಚಯವಾಗಿ; [2] ಉತ್ತರೋತ್ತರಮೆ—ಇನ್ನೂ ಮೇಲಾಗಿ;
[3] ನೆಗಳ್ದಂ—ಪ್ರಸಿದ್ಧಿ ಹೊಂದಿದ.

ನಿರ್ಮಲವಾದ ಜೈನಧರ್ಮವೇ ಸರಿಯೆಂದು ಅವನ ಭಾವನೆ. ತನ್ನ ತಂದೆ ಜೈನನಾಗಿ, ಶ್ರೇಷ್ಠವಾದ ತನ್ನ ಜಾತಿಯನ್ನು ಶ್ರೇಷ್ಠತರವಾಗಿ ಮಾಡಿದನೆಂದು ಅವನಲ್ಲಿ ಪಂಪನಿಗೆ ತುಂಬ ಅಭಿಮಾನ.

ಹೀಗೆ, ಅನೂಚಾನವಾಗಿ ಬಂದ ಬ್ರಾಹ್ಮಣ ಸಂಪ್ರದಾಯದ ಜೊತೆಗೆ ಹೊಸದಾಗಿ ಒದಗಿದ ಜೈನಸಂಸ್ಕಾರವೂ ಪಂಪನ ಬದುಕಿನಲ್ಲಿ ಬೆರೆಯಿತು. ಎರಡೂ ವಿಹಿತವಾಗಿ ಕೂಡಿಕೊಂಡುವೇ ಹೊರತು, ಒಂದನ್ನೊಂದು ಹೊರದೂಡಲಿಲ್ಲ. ಧರ್ಮಾಂತರ ದೊಂದ್ದಿದರೂ ಧರ್ಮಾಂಧತೆ ಇಲ್ಲಿ ಕವಿಯಲಿಲ್ಲ. ಪಂಪನ ಮನಸ್ಸು ಎರಡು ಸಂಸ್ಕೃತಿಗಳ ಸಾರವನ್ನೂ ಒಳಕೊಂಡು ಪುಷ್ಟಿಹೊಂದಿತು, ಉದಾರವಾಯಿತು. ಇದರ ಫಲ ಅವನ ಕವಿತೆಗೂ ಒದಗಿತು.

ಪಂಪನ ಮನೆತನದವರು ಇದ್ದುದು ವೆಂಗಿಮಂಡಲದ ವೆಂಗಿಪಟುವೆಂಬ ಅಗ್ರಹಾರದಲ್ಲಿ. ವೆಂಗಿಮಂಡಲವು ಕೃಷ್ಣಾ ಗೋದಾವರೀ ನದಿಗಳ ನಡುವೆ ಪೂರ್ವಸಮುದ್ರದ ಕರೆಯ ತನಕ ಮುಟ್ಟಿದ್ದ ವಿಸ್ತಾರವಾದ ನಾಡು. ಇದು ಆಂಧ್ರಭೂಮಿಯಾದರೂ, ನಮ್ಮ ಸಾಹಿತ್ಯದಲ್ಲಿ ಹೆಸರುವಾಸಿಯಾಗಿರುವ ಅನೇಕ ಕನ್ನಡ ಮನೆತನಗಳು ಇಲ್ಲಿ ನೆಲಸಿದ್ದಂತೆ ಗೊತ್ತಾಗುತ್ತದೆ. ಪಂಪನು ತನ್ನ ಹಿರಿಯರ ಊರಿನಲ್ಲೇ ಹುಟ್ಟಿ ಬೆಳೆದನೆ ಎಂಬ ವಿಷಯದಲ್ಲಿ ಸಂದೇಹವಿದೆ. ಮುಂದೆ ಅವನು ದೊಡ್ಡ ಕವಿಯಾಗಿ, ವೆಂಗಿಮಂಡಲದ ಪಶ್ಚಿಮದ ಕಡೆ, ಕನ್ನಡ ಸೀಮೆಗೆ ಹತ್ತಿರವಾಗಿ ಲೆಂಬುಳಪಾಟಕವೆಂಬ[1] ಪಟ್ಟಣದಲ್ಲಿ

[1] ಇದು ನೈಜಾಮರ ರಾಜ್ಯದ ಕರೀಂನಗರ ಜಿಲ್ಲೆಯಲ್ಲಿ ಈಗ ವೇಮುಲವಾಡ ಎಂಬ ಹೆಸರನ್ನುಳ್ಳ ಊರು.

ರಾಜ್ಯವಾಳುತ್ತಿದ್ದ ಚಾಳುಕ್ಯವಂಶದ ಎರಡನೆಯ ಅರಿಕೇಸರಿಯ ಆಸ್ಥಾನವನ್ನು ಸೇರಿದನು. ಈ ಪ್ರಭುವಿನ ಆಶ್ರಯದಲ್ಲಿ ಕಾವ್ಯ ರಚನೆ ಮಾಡಿ, ಅದಕ್ಕೆ ಫಲವಾದ 'ಪೂಜೆ ನೆಗಱ್ತೆ ಲಾಭ' ಗಳನ್ನೆಲ್ಲಾ ಪಡೆದನು. ಹೀಗೆ ಪಂಪನ ಪೂರ್ವೋತ್ತರಗಳು ವೆಂಗಿಮಂಡಲಕ್ಕೇ ಸಂಬಂಧಿಸಿದ್ದರೂ ಅವನ ಹೃದಯ ನೆಲಸಿದ್ದುದು ಮಾತ್ರ ಅಲ್ಲಿಗೆ ಎಷ್ಟೋ ದೂರದಲ್ಲಿದ್ದ ಬನವಾಸಿ ದೇಶದಲ್ಲಿ—ಅಚ್ಚಗನ್ನಡ ಪ್ರಾಂತವ ಮಲೆನಾಡಿನ ಮಡಿಲಿನಲ್ಲಿ. ಪಂಪನು ಮಾಡಿರುವ ಬನವಾಸಿದೇಶದ ವರ್ಣನೆ ತುಂಬ ಪ್ರಸಿದ್ಧವಾಗಿದೆ. ದೇಶದೇಶವನ್ನು ಸುತ್ತಿ ಬನವಾಸಿಯ ಪ್ರಾಂತಕ್ಕೆ ಬಂದ ಅರ್ಜುನನು ಇಲ್ಲಿಯ ಚೆಲುವಿಗೆ ಮೆಚ್ಚಿ ಆ ಮಾತುಗಳನ್ನು ಆಡಿದಂತೆ ಪಂಪನು ನಿರೂಪಿಸಿದ್ದಾನೆ; ಆದರೆ ನಿಜವಾಗಿ ಇದು ಪಂಪನ ಹೃದಯದಿಂದಲೇ ಉಕ್ಕಿದ ಹಂಬಲಿಕೆಯ ಚಿಲುಮೆ:

**ಸೊಗಯಿಸಿ ಬಂದ[1] ಮಾಮರನೆ ತಳ್ತೆಲೆವಳ್ಳಿಯೆ ಪೂತ[2] ಜಾತಿ ಸಂ-
ಪಗೆಯೆ ಕುಕಿಲ್ವ ಕೋಗಿಲೆಯೆ ಪಾಡುವ ತುಂಬಿಯೆ ನಲ್ಲರ- ಒಳ್ಮೊಗಂ
ನಗೆಮೊಗದೊಳ್ ಪಳಂಚಲೆಯೆ[3] ಕೂಡುವ ನಲ್ಲರೆ—ನೋಟ್ಪೊಡ-
ಆವ ಚಿ-
ಟ್ಟುಗಳೊಳಂ- ಆವ ನಂದನವನಂಗಳೊಳಂ ಬನವಾಸಿದೇಶದೊಳ್. ....**

ಹಿಂದೆ ಪಂಪನು ಬನವಾಸಿಯ ಪ್ರಾಂತದ ದಟ್ಟವಾದ ವನಗಳಲ್ಲಿ ಅಲೆದಾಡಿ, ಅಲ್ಲಿಯ ಹೂವುಗಳ ಕಂಪನ್ನು ಹೀರಿ, ತೆಂಕಣ ತಂಗಾಳಿಗೆ ಮೈಯೊಡ್ಡಿ, ನಲ್ಮೆಯ ಕೇಳಿಗಳಲ್ಲಿ ಮೈಮರೆತು ಸುಖಪಟ್ಟಿರಬೇಕು. ಈಗ ಲೆಂಬುಳಪಾಟಕದ

---

[1] ಬಂದ — ಫಲಬಿಟ್ಟ ; [2] ಪೂತ — ಹೂವುಬಿಟ್ಟ ; [3] ಪಳಂಚಲೆಯೆ— ಸೋಕಿ ಸರಸವಾಡುವಾತೆ.

ಬಿರುಬೇಸಗೆಯ ಎರೆನೆಲದಲ್ಲಿ ಕಾಲ ನೂಕುತ್ತಿರುವಾಗ ಅವನಿಗೆ ಆ ಹಳೆಯ ನೆನಪು ಮಿಂಚಿ, ಬನವಾಸಿಯ ನಾಡೆಲ್ಲ ನಂದನ ವನದಂತೆ ತೋರುತ್ತಿದೆ. ಅಲ್ಲಿ ಮನುಷ್ಯನಾಗಿ ಹುಟ್ಟಿ ರಸಿಕ ನಾಗಿ ಬಾಳಬೇಕು; ಆ ಅದೃಷ್ಟವಿಲ್ಲದಿದ್ದರೆ ಕಡೆಗೆ ಮರಿ ದುಂಬಿಯೋ ಕೋಗಿಲೆಯೋ ಆಗಿಯಾದರೂ ಅಲ್ಲಿ ಹುಟ್ಟಿ ವಿಹರಿಸಬೇಕು ಎಂದುಕೊಳ್ಳುತ್ತಾನೆ. ಇಷ್ಟೇ ಅಲ್ಲ.—

ತೆಂಕಣಗಾಳಿ ಸೋಂಕಿದೊಡಂ- ಒಳ್ನುಡಿಗೇಳ್ದೊಡಂ- ಇಂಪನಾಳ್ದ ಗೇ-
ಯಂ[1] ಕಿವಿವೊಕ್ಕೊಡಂ ಬಿರಿದ ಮಲ್ಲಿಗೆಗಂಡೊಡಂ- ಆದ ಕೆಂದಲಂ-
ಪಂ[2] ಗೆಡೆಗೊಂಡೊಡಂ ಮಧುಮಹೋತ್ಸವಮಾದೊಡಂ- ಏನನೆಂಬೆನ್- ಆರ್-
ಅಂಕುಸವಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿದೇಶಮಂ !....

ಪಂಪನು ವಾಸವಾಗಿರುವ ಕಡೆಯಲ್ಲಿ ಅಪೂರ್ವವಾಗಿ ಒಂದು ಲಲಿತಸುಖದ ಅನುಭವ ಒದಗಿದರೆ, ಅವನ ಮನಸ್ಸು ತಡೆದರೂ ನಿಲ್ಲದೆ—ಅಂಕುಶದಿಂದ ಚುಚ್ಚಿದರೂ ಲಕ್ಷ್ಯಮಾಡದ ಆನೆ ಯಂತೆ—ಬನವಾಸಿ ದೇಶವನ್ನು ನೆನೆದುಕೊಳ್ಳುತ್ತದೆ. ಅಲ್ಲಿ ಹಿಂದೆ ಕಂಡ ಇಂಪು ತಂಪು ಸವಿ ಸೊಬಗುಗಳು ಅವನ ಹೃದಯ ವನ್ನು ಇಷ್ಟುಮಟ್ಟಿಗೆ ಸೆಳೆದಿವೆ. ಪಂಪನು ಎಲ್ಲಿಯೇ ಹುಟ್ಟಿ ಬೆಳೆದಿರಲಿ, ಬನವಾಸಿಯ ಮಲೆನಾಡಿನಲ್ಲಿ ಅವನ ಜೀವಮಾ ನದ ಸಾರವತ್ತಾದ ಭಾಗ ಕಳೆದಿರಬೇಕು. ಅಲ್ಲಿಯ ಸೊಗಸು ಅವನ ಮನಸ್ಸನ್ನು ತಿದ್ದಿ, ಕವಿತಾಶಕ್ತಿಯನ್ನು ಪುಟಗೊಳಿಸಿರ ಬೇಕು. ಅವನ ಕಾವ್ಯದ ಭಾಷೆ ಕೂಡ ಈ ಬನವಾಸಿ ಪ್ರಾಂತದ ನೆರೆಯಲ್ಲಿದ್ದ 'ಪುಲಿಗೆಱೆ[3]ಯ ತಿರುಳ ಕನ್ನಡ.' ಲಾಭಕಕ್ಕಾಗಿ

---

[1] ಇಂಪನಾಳ್ದ ಗೇಯಂ—ಮಧುರವಾದ ಗಾಯನ; [2] ಕೆಂದಲಂಪಂ—ಪ್ರೇಮಸುಖವನ್ನು. [3] ಪುಲಿಗೆಱೆ—ಧಾರವಾಡ ಜಿಲ್ಲೆಯಲ್ಲಿ ಈಗ ಲಕ್ಷ್ಮೇಶ್ವರ ಎಂಬ ಹೆಸರನ್ನುಳ್ಳ ಊರು.

ಗೌರವಕ್ಕಾಗಿ ಇತರ ಕಾರಣಕ್ಕಾಗಿ ಅವನು ದೂರದೇಶದಲ್ಲಿ ನಿಲ್ಲಬೇಕಾಯಿತು. ಆದರೆ ನಲ್ಲೆಯನ್ನಗಲಿದ ಪ್ರಿಯನಂತೆ, ಈ ಪ್ರವಾಸಿ ತನ್ನ ನಚ್ಚಿನ ನಾಡಿಗಾಗಿ ಹಂಬಲಿಸುತ್ತಾನೆ; 'ತೆಂಕನಾಡ ಮುಱಿಯಲ್ಕೆ- ಇನ್ನೇಂ ಮನಂ ಬರ್ಕುಮೇ' ಎಂದು ನಿಟ್ಟುಸಿರಿಡುತ್ತಾನೆ!

ಪಂಪನಿಗೆ ಬನವಾಸಿಯ ನೆನಪನ್ನು ಮಾತ್ರ ಉಳಿಸಿಕೊಟ್ಟು, ವೆಂಗಿಮಂಡಲದ ಪಡುಗಡಿಯಲ್ಲೇ ಅವನನ್ನು ನಿಲ್ಲಿಸಿಕೊಂಡವನು ಅರಿಕೇಸರಿ. ಪಂಪನ ಗುಣಾತಿಶಯಗಳು ಅರಿಕೇಸರಿಯ ಮನಸ್ಸನ್ನು ಸೆರೆಹಿಡಿದುವು; ಅವನು ಈ ಕವಿಯನ್ನು ಪ್ರೀತಿಯಿಂದ ಬರಮಾಡಿಕೊಂಡು 'ವಿಕ್ರಮಾರ್ಜುನ ವಿಜಯ'ವನ್ನು ಅವನಿಂದ ಬರಸಿದನು. ಇದಕ್ಕಾಗಿ ಪಂಪನಿಗೆ ಲೆಕ್ಕವಿಲ್ಲದಷ್ಟು ಒಡವೆವಸ್ತುಗಳನ್ನು ಕೊಟ್ಟದ್ದಲ್ಲದೆ ಧರ್ಮಪುರವೆಂಬ ಮನೋಹರವಾದ ಅಗ್ರಹಾರವನ್ನು ಶಾಸನ ಹಾಕಿಸಿ ಕೊಟ್ಟನು. ಈ ಮೊದಲೇ ತನ್ನ 'ಗುಣಾರ್ಣವ'ನೆಂಬ ಬಿರುದಿಗೆ ಸರಿಜೋಡಿಯಾಗುವಂತೆ 'ಕವಿತಾಗುಣಾರ್ಣವ'ನೆಂಬ ಬಿರುದನ್ನು ಅವನಿಗೆ ಕೊಟ್ಟು ಸನ್ಮಾನಿಸಿದ್ದನು. ಇತ್ತ ಪಂಪನು ಪುರಾಣಪ್ರಸಿದ್ಧರಾದ ರಾಜರಿಗಿದ್ದ ಉದಾತ್ತಗುಣಗಳನ್ನು ಅರಿಕೇಸರಿಯಲ್ಲಿ ಕಂಡು ಮೆಚ್ಚಿದನು; ಹೆಚ್ಚೇಕೆ, ಮಹಾಭಾರತದ ಅರ್ಜುನನೇ ಸಾಕ್ಷಾತ್ತಾಗಿ ಇಲ್ಲಿದ್ದಂತೆ ಅವನಿಗೆ ತೋರಿತು. ಆದಕಾರಣ, ಅರಿಕೇಸರಿ ಬೇರೆಯಲ್ಲ ಅರ್ಜುನ ಬೇರೆಯಲ್ಲ, ಇವನೇ ಅವನು—ಎಂದು ಕಂಠೋಕ್ತವಾಗಿ ಹೇಳಿ, ಭಾರತಕಥೆಯಲ್ಲಿ ಅರಿಕೇಸರಿಯ ಚರಿತ್ರೆಯನ್ನು ಬೆರಸಿ ಹೇಳುವ ಉದ್ದೇಶದಿಂದ 'ವಿಕ್ರಮಾರ್ಜುನ ವಿಜಯ'ವನ್ನು ರಚಿಸಿದನು; ತನ್ನ ಸ್ವಾಮಿಯ ಕೀರ್ತಿಯನ್ನು ಎಲ್ಲ ಕಾಲಕ್ಕೂ ನಿಲ್ಲಿಸಿಕೊಟ್ಟನು. ಇದರಮೇಲೆ, ಪಂಪನು ಕವಿ ಮಾತ್ರವೇ ಅಲ್ಲ;

ಕಲಿಯೂ ಹೌದು. ತನ್ನ ಒಡೆಯನ ಕಾಳಗಗಳಲ್ಲಿ ಅವನು ಶೌರ್ಯದಿಂದ ಹೋರಾಡಿದ್ದೂ ಉಂಟು. ಹೀಗೆ ಪ್ರಭುವಿಗೂ ಆಶ್ರಿತನಿಗೂ ಬೇಕಾದಷ್ಟು ಪರಸ್ಪರ ಪ್ರಯೋಜನವಾಯಿತು.

ಆದರೂ, ತನಗೂ ಅರಿಕೇಸರಿಗೂ ಇದ್ದ ಸಂಬಂಧ ಇಷ್ಟು ದೂರವಲ್ಲೇ ತಡೆದಿದ್ದರೆ ಪಂಪನು ರಾಜಾಶ್ರಯದಲ್ಲಿ ಹೆಚ್ಚು ಕಾಲ ನಿಲ್ಲುತ್ತಿದ್ದನೋ ಇಲ್ಲವೋ. ' ಓಲಗಿಸಿ ಬಾಳ್ವುದೆ ಕಷ್ಟಂ-ಇಳಾಧಿನಾಥರಂ 'ಎಂಬುವನ್ನು ಅವನು ತಿಳಿದಿದ್ದನು ; ನರೇಂದ್ರರಲ್ಲಿ ಒಂದು ಕಡೆ ಶೌರ್ಯ, ಔದಾರ್ಯ ಮೊದಲಾದ ಗುಣಗಳಿದ್ದರೆ ಇನ್ನೊಂದು ಕಡೆ ಮದ, ಅವಿವೇಕ ಮೊದಲಾದುವು ಇರುವುದನ್ನು ಅವನು ಕಂಡಿದ್ದನು. ಇದರಮೇಲೆ, ತಾನು ' ಅಭಿಮಾನಮೂರ್ತಿ ' ; ಸಮಯ ಬಿದ್ದರೆ, ' ಪೆಱರೀವುದೇಂ, ಪೆಱರ ಮಾಡುವುದೇಂ, ಪೆಱರಿಂದವಪ್ಪುದೇಂ ! ' ಎಂದು ಘೋಷಿಸತಕ್ಕ ಕೆಚ್ಚುಳ್ಳವನು. ಇಂಥ ಸ್ವತಂತ್ರಪ್ರವೃತ್ತಿಯ ಮನುಷ್ಯನು ರಾಜನ ಹತ್ತಿರ ನಿಲ್ಲುವಂತೆ ಕಟ್ಟಿಹಾಕಿದ್ದು—ಸ್ನೇಹ. ಅರಿಕೇಸರಿಗೂ ಪಂಪನಿಗೂ ಇದ್ದ ಸಂಬಂಧವು ಸ್ವಾಮಿ-ಸೇವಕ ಭಾವವನ್ನು ಮೀರಿ, ಪ್ರೀತಿ ಗೌರವಗಳಲ್ಲಿ ಬೇರೂರಿ, ಅತ್ಯುತ್ತಮವಾದ ನಿಷ್ಕಪಟವಾದ ಸ್ನೇಹದಲ್ಲಿ ಅರಳಿದಂತೆ ತೋರುತ್ತವೆ. ಇವರಿಬ್ಬರ ಹೊಂದಿಕೆಯನ್ನು ಆಲೋಚಿಸಿದಾಗ ಕೃಷ್ಣಾರ್ಜುನರ–ಅದಕ್ಕಿಂತ ಹೆಚ್ಚಾಗಿ ಕರ್ಣದುರ್ಯೋಧನರ–ಗೆಳೆತನ ನೆನಪಿಗೆ ಬರುತ್ತದೆ. ಆಶ್ರಯವಿಹೀನನಾಗಿದ್ದ ಕರ್ಣನಿಗೆ ದುರ್ಯೋಧನನು ಅಂಗರಾಜ್ಯವನ್ನು ಕೊಟ್ಟು ಅಭಿಷೇಕಮಾಡಿದ ಬಳಿಕ, ಈ ಹೊಸ ಸಾಮಂತನನ್ನು—

ಪೊಡಮಡುವರಂ ಜೀಯೆಂಬರ್ ;
' ಕುಡು, ದಯೆಗೆಯ್ , ಏಂ ಪ್ರಸಾದಂ '—ಎಂಬಿವು ಪೆಱರೊಳ್

ನಡೆಗೆ- ; ಎವ್ವ್ ನಿನ್ನ ಯೆಡೆಯೊಳ್
ನಡೆಯುಲ್ವೇಡ- . ಎಸಗೆ ಕೆಳೆಯಂನ್ನೆ ರಾಧೇಯಾ.

ಎಂದು 'ಬೇಡಿಕೊಂಡ' ನಂತೆ! ಅರಿಕೇಸರಿಗೂ ಪಂಪನಿಗೂ ಇದೇ ಬಗೆಯ ವ್ಯವಹಾರವಿದ್ದಿರಬಹುದೆ ?—ಸ್ನೇಹ ಸಲಿಗೆಗಳು ಎಷ್ಟು ದೂರ ಹೋಗಬಲ್ಲುವೆಂಬುವನ್ನು ಅರಿಕೇಸರಿಯ ಸಹ ವಾಸದಲ್ಲಿ ಪಂಪನು ಅರಿಯದೆ ಇದ್ದರೆ, ತನ್ನ ಕಾವ್ಯದಲ್ಲಿ ಕರ್ಣ ದುರ್ಯೋಧನರ ಗೆಳೆತನವನ್ನು ಈಗಿರುವಷ್ಟು ಮಾರ್ಮಿಕವಾಗಿ ಚಿತ್ರಿಸಲು ಸಾಧ್ಯವಾಗುತ್ತಿರಲಿಲ್ಲವೇನೋ!

ಅರಿಕೇಸರಿಯ ಪರಿಚಯಕ್ಕೆ ಪಂಪನು ತನ್ನ ಕಾವ್ಯದ ಎಷ್ಟೋ ಭಾಗವನ್ನು ಮೀಸಲಾಗಿರಿಸಿದ್ದಾನೆ. ಅವನ ವಂಶ ಕಥೆಯನ್ನು ಎಷ್ಟು ವಿಸ್ತರಿಸಿದರೂ, ಅವನ ಸಾಹಸವನ್ನು ಎಷ್ಟು ಶ್ಲಾಘಿಸಿದರೂ, ಅವನ ಬಿರುದುಗಳನ್ನು ಎಷ್ಟು ಹೊಗಳಿದರೂ ಇವನಿಗೆ ತಣಿವಿಲ್ಲ. ಇತಿಹಾಸವನ್ನು ಬರೆಯುವವರಿಗೆ ಇದರಿಂದ ಅನೇಕ ಸಂಗತಿಗಳು ಖಚಿತವಾಗಿ ತಿಳಿದುಬಂದಿವೆ. ಆದರೆ ಕಾವ್ಯ ಲೋಲರಾದ ನಮಗೆ ಅರಸನಿಗಿಂತ ಕವಿಯ ವಿಷಯದಲ್ಲೇ ಆಸಕ್ತಿ ಹೆಚ್ಚು. ಪಂಪನೇ ಕೊಟ್ಟಿರುವ ತನ್ನ ಚಿತ್ರ ಇದು :

ಕದಳೀಗರ್ಭಶ್ಯಾಮಂ,
ಮೃದುಕುಟಿಲ ಶಿರೋರುಹಂ, ಸರೋರುಹವದನಂ,
ಮೃದು ಮಧ್ಯಮ ತನು, ಹಿತ ಮಿತ-
ಮೃದುವಚನಂ, ಲಲಿತ ಮಧುರ ಸುಂದರ ವೇಷಂ.

ಪಂಪನದು ಕನ್ನಡಿಗರಿಗೆ ಸಹಜವಾದ ನಸುಗಪ್ಪುಬಣ್ಣ (ಅರಿ ಕೇಸರಿಯ ಮೈಬಣ್ಣವೂ ಇದೇ!), ಮಟ್ಟಸನಾದ ಆಕೃತಿ, ಮೃದುವಾದ ಗುಂಗುರುಗುರುಳು, ದುಂಡಾದ ಮುಖ ; ಇವುಗಳ ಜೊತೆಗೆ ಅವನ 'ಹಿತಮಿತಮೃದುವಚನ'ವೂ 'ಲಲಿತಮಧುರ ಸುಂದರವೇಷ'ವೂ ನಮ್ಮನ್ನು ಆಕರ್ಷಿಸುತ್ತವೆ. ಪಂಪನ ದನಿ

ಯನ್ನು ಕೇಳುವ ಅದೃಷ್ಟ ನಮಗಿಲ್ಲದಿದ್ದರೂ ಅದರ ಗುಣಗಳನ್ನು ಅವನ ಕಾವ್ಯಗಳಲ್ಲಿ ಇಂದಿಗೂ ಆಸ್ವಾದಿಸಬಹುದು. ವೇಷ ಭೂಷಣಗಳ ವಿಷಯದಲ್ಲಿ ಅವನಿಗೆ ತುಂಬ ಆಸಕ್ತಿ. ತಾನು 'ಲಲಿತಾಲಂಕರಣ'ನೆಂದು ಅವನು ಬೇರೊಂದು ಕಡೆ ತಿಳಿಸಿ ದ್ದಾನೆ. ಯಾವ ಋತುವಿಗೆ ಯಾವ ಉಡಿಗೆ ತೊಡಿಗೆ ಒಪ್ಪು ತ್ತದೆ, ಯಾವ ಹೊತ್ತಿನಲ್ಲಿ ಹೇಗೆ ರಚನೆಮಾಡಿದರೆ ಹೊಂದು ತ್ತದೆ—ಎಂಬ ಸೂಕ್ಷ್ಮಾಂಶಗಳಿಗೆ ಗಮನಕೊಡುವ ರಸಿಕತೆ ಅವನಲ್ಲಿತ್ತು. ಪಂಪನು "ಸಿಸ್ತುಗಾರ"ನಾಗಿದ್ದನೆಂದರೂ ತಡೆ ಯುತ್ತದೆ. ಇದಕ್ಕೆ ತಕ್ಕಹಾಗೆ, ತಾನು 'ವನಿತಾಕಟಾಕ್ಷ ಕುವಲಯವನ ಚಂದ್ರ'ನಾಗಿದ್ದುದನ್ನೂ, ಕೇರಳ ಮಲಯ ಆಂಧ್ರ ಮೊದಲಾದ ನಾಡುಗಳ ಸುಂದರಿಯರು ತನಗೆ ಪ್ರಿಯೆ ಯರಾಗಿದ್ದುದನ್ನೂ ಅವನು ಸಂಕೋಚವಿಲ್ಲದೆ ಹೇಳಿಕೊಂಡಿ ದ್ದಾನೆ. ಪಂಪನು ಸ್ತ್ರೀರೂಪದ ಮೋಹಕತೆಯನ್ನು ಬಲ್ಲವನು; ಒಲುಮೆಯ ತಿರುಳನ್ನು ಕಂಡವನು. ಅವನ ಕಾವ್ಯದಲ್ಲಿ 'ಸಾರಂ- ಅನಂಗಜಂಗಮಲತಾ ಲಲಿತಾಂಗಿಯರಿಂದಮಲ್ತೆ ಸಂಸಾರಂ!' ಎಂಬ ಮಾತು ಋಷಿಶಾಪಕ್ಕೆ ಗುರಿಯಾದ ಪಾಂಡುಮಹಾ ರಾಜನ ಬಾಯಿಂದ ಹೊರಡುತ್ತದೆ. ಇದು ಕೇವಲ ಒಂದು ಪಾತ್ರದ ಉದ್ಗಾರವಲ್ಲ; ಕವಿಯ ಅಭಿಪ್ರಾಯವೂ ಇದೇ ಆಗಿದ್ದಿ ತೆಂದು ಸಂಶಯವಿಲ್ಲದೆ ಹೇಳಬಹುದು.

ಹೆಣ್ಣಿನ ಸೊಬಗಿಗೆ ಮನಸೋತಿದ್ದ ಪಂಪನು ಅಷ್ಟೇ ಸುಕುಮಾರವಾದ ಹೂವುಗಳ ವಿಷಯದಲ್ಲೂ ಉತ್ಸುಕನಾಗಿ ದ್ದುದು ಆಶ್ಚರ್ಯವಲ್ಲ. 'ಆದಿಪುರಾಣ'ದ ಹನ್ನೊಂದನೆಯ ಆಶ್ವಾಸದಲ್ಲಿ ಪುಷ್ಪಗಳ ಪ್ರದರ್ಶನವನ್ನೇ ನೋಡಬಹುದು. ಪಂಪನ ಕಾವ್ಯದ ರಮಣಿಯರಿಗೆ ಅವುಗಳನ್ನು ಬಿಡಿಸಿ ಮುಡಿದು ತೃಪ್ತಿಯಿಲ್ಲ; ಇವನಿಗೆ ಅವುಗಳನ್ನೂ ಅವರನ್ನೂ ವರ್ಣಿಸಿ

ತೃಪ್ತಿಯಿಲ್ಲ. ಒಂದೊಂದು ಜಾತಿಯ ಹೂವಿನಲ್ಲಿ ಒಂದೊಂದು ಗುಣವಿಶೇಷ ಅವನ ಕಣ್ಣಿಗೆ ಬೀಳುತ್ತದೆ. ಆದರೂ ಮಲ್ಲಿಗೆ ಯಲ್ಲಿ ಅವನಿಗೆ ಅಭಿಮಾನ ಎಲ್ಲಕ್ಕೂ ಹೆಚ್ಚು. ಮಲ್ಲಿಗೆಯೂ ಮಾವೂ ವರ್ಷದ ಉದ್ದಕ್ಕೂ ಬಿಡುತ್ತಿದ್ದರೆ, 'ಪೞಿತಾವುದು ಸಂಸಾರಸಾರಸರ್ವಸ್ವ ಫಲಂ'!

ಇನ್ನು ಪಂಪನ ಕಾಲದ ವಿಚಾರ. ತಾನು ಆದಿಪುರಾಣ ವನ್ನು ರಚಿಸಿದ್ದು 'ಶಕವರ್ಷಮೆಂಟುನೂಱಕ್ಕೆ ಕಡೆಯೊಳಱುವತ್ತು ಮೂಱು ಸಂದಂದು' ಪ್ಲವಸಂವತ್ಸರದಲ್ಲಿ ಎಂದಿಷ್ಟು ಹೇಳಿ ಬಿಡದೆ, ಅದು ಮುಗಿದ ತಿಥಿ ವಾರ ನಕ್ಷತ್ರಗಳನ್ನೂ ಅವನು ಕೊಟ್ಟಿದ್ದಾನೆ. ಇದರಿಂದಲೇ ಕೊಂಚ ತೊಡಕುಂಟಾಗಿದೆ. ಈ ರಚನೆಯ ಕಾಲ ಕ್ರಿ.ಶ. ೯೪೧ಕ್ಕೆ ಸರಿಹೋಗುವುದೆಂದೇ ಸಾಮಾನ್ಯಭಾವನೆ. ಆದರೆ ಈಚೆಗೆ ಒಬ್ಬಿಬ್ಬರು ವಿದ್ವಾಂಸರು ಲೆಕ್ಕಹಾಕಿ ಅದು ಕ್ರಿ. ಶ. ೯೪೨ಕ್ಕೆ ಸಲ್ಲುತ್ತದೆಂದು ಒಂದು ವರ್ಷ ಮುಂದಕ್ಕೆ ನೂಕಿದ್ದಾರೆ. ಆದಿಪುರಾಣರಚನೆಯ ಸಹಸ್ರ ವರ್ಷೋತ್ಸವವನ್ನು ಸದ್ಯದಲ್ಲೇ ನಡಸಬೇಕಷ್ಟೆ; ಇದಕ್ಕೆ ಮುಹೂರ್ತ ಒದಗುವುದು ೧೯೪೧ರಲ್ಲೋ ೧೯೪೨ರಲ್ಲೋ ಎಂಬುದು ಆದಷ್ಟು ಬೇಗ ನಿಷ್ಕರ್ಷೆಯಾದರೆ ಒಳ್ಳೆಯದು.

ಪಂಪನು 'ದುಂದುಭಿಸಂವತ್ಸರೋದ್ಭವ'ನಾದ್ದರಿಂದ, ಆದಿಪುರಾಣವನ್ನು ಬರೆದಾಗ ಅವನಿಗೆ ಮೂವತ್ತೊಂಬತ್ತು ವರ್ಷ. ಈವೇಳೆಗಾಗಲೆ ಅವನು ಅರಿಕೇಸರಿಯ ಆಶ್ರಯವನ್ನು ಪಡೆದಿದ್ದನೆಂಬುದು ಅವನ 'ಕವಿತಾಗುಣಾರ್ಣವ' ಎಂಬ ಬಿರುದಿ ನಿಂದ ಗೊತ್ತಾಗುತ್ತದೆ. ಆದಾದ ಕೆಲವು ಕಾಲಕ್ಕೆ ಅವನು 'ವಿಕ್ರಮಾರ್ಜುನ ವಿಜಯ'ವನ್ನು ರಚಿಸಿದನು; ಈ ಗ್ರಂಥವನ್ನು ಒಂದು ವರ್ಷವಲ್ಲಿ ಮುಗಿಸಬೇಕೆಂದು ಅರಿಕೇಸರಿ ಕೋರಿದ ನಂತೆ. ಪಂಪನ ನಿರರ್ಗಳವಾದ ಕವಿತಾವಾಹಿನಿಗೆ ಇಷ್ಟು

ಕಡಮೆಯ ಅವಧಿ ಕೂಡ ಬೇಕಾಗಲಿಲ್ಲ :

**ಬೆಳಗುವೆನಿಲ್ಲಿ ಲೌಕಿಕಮನ್- ಅಲ್ಲಿ ಜಿನಾಗಮಮಂ ಸಮಸ್ತ ಭೂ-**
**ತಳಕೆ ಸಮಸ್ತ ಭಾರತಮುಮಂ- ಆದಿಪುರಾಣಮುಮೆಂದು ಮೆಯ್- ಅಸುಂ-**
**ಗೊಳುತಿರೆ ಪೂಣ್ದು [1], ಪೂಣ್ದ ತೆಱದೆ- ಒಂದು- ಆಱುದಿಂಗಳೊಳ್-**
**ಒಂದು ಮೂಱು ತಿಂ-**
**ಗಳೊಳೆ ಸಮಾಪ್ತಿಯಾದುದನೆ ಬಣ್ಣಿಸಿದಂ ಕವಿತಾಗುಣಾರ್ಣವಂ !**

'ಸಮಸ್ತಭಾರತ'ವನ್ನು (ಎಂದರೆ, 'ವಿಕ್ರಮಾರ್ಜುನ ವಿಜಯ' ಅಥವಾ 'ಪಂಪಭಾರತ'ವನ್ನು) ಆರು ತಿಂಗಳಲ್ಲಿಯೂ 'ಆದಿ ಪುರಾಣ'ವನ್ನು ಮೂರು ತಿಂಗಳಲ್ಲಿಯೂ ಕವಿತಾಗುಣಾರ್ಣವನು ಸಮಾಪ್ತಿಗೊಳಿಸಿಬಿಟ್ಟನು! ಒಂದೇ ವರ್ಷದೊಳಗೆ ಎರಡನ್ನೂ ಅವನು ಬರೆದನೆಂದು ಈ ಪದ್ಯಕ್ಕೆ ಕೆಲವರು ಅರ್ಥಮಾಡುತ್ತಾರೆ. ಆದರೆ ಪಂಪನ ಶಕ್ತಿಯನ್ನು ಸ್ಥಾಪಿಸುವುದಕ್ಕೆ ಇಷ್ಟು ದೂರ ಹೋಗಬೇಕಾಗಿಲ್ಲ. ಈ ಎರಡು ಗ್ರಂಥಗಳ ಶೈಲಿಯನ್ನು ಹೋಲಿಸಿದರೆ ಎರಡಕ್ಕೂ ನಡುವೆ ತಕ್ಕಮಟ್ಟಿನ ಕಾಲ ಕಳೆದಿರ ಬೇಕೆಂದು ಚೆನ್ನಾಗಿ ಗೊತ್ತಾಗುತ್ತದೆ.

'ಬೆಳಗುವೆನ್- ಇಲ್ಲಿ ಲೌಕಿಕಮನ್-, ಅಲ್ಲಿ ಜಿನಾಗಮಮಂ.'—ಈ ಪ್ರತಿಜ್ಞೆಯನ್ನು ನೆರವೇರಿಸಲು ಪಂಪನು ತನ್ನ ಎರಡು ಕಾವ್ಯಗಳಿಗೂ ಆಧಾರವಾಗಿ ಎರಡು ಮಹಾ ಕೃತಿಗಳನ್ನೇ ಸಂಸ್ಕೃತದಿಂದ ಆರಿಸಿಕೊಂಡನು: ಒಂದು ವ್ಯಾಸರ 'ಮಹಾಭಾರತ', ಇನ್ನೊಂದು ಜಿನಸೇನ-ಗುಣಭದ್ರಸೂರಿಗಳ 'ಮಹಾಪುರಾಣ'. ವೈದಿಕಧರ್ಮದವರಲ್ಲಿ ಮಹಾಭಾರತ ಕ್ಕಿರುವ ಪೂಜ್ಯತೆಯನ್ನು ಇಲ್ಲಿ ವರ್ಣಿಸುವುದು ಅನಾವಶ್ಯಕ. ಮತದ ದೃಷ್ಟಿಯನ್ನು ಬಿಟ್ಟು, ಅದನ್ನು ಪಂಪನಂತೆ ಲೌಕಿಕ

[1] ಮೆಯ್ ಅಸುಂಗೊಳುತಿರೆ ಪೂಣ್ದು—(ತಾನು ಹಿಡಿದ ಕಾವ್ಯದ ಅಗಾಧತೆಗೆ) ಮೈ ಬೆಚ್ಚಿ ಬೆಂಡಾಗುತ್ತಿರಲು ಪ್ರತಿಜ್ಞೆ ಮಾಡಿ.

ದೃಷ್ಟಿಯಿಂದ ಕೇವಲ ಕಾವ್ಯವಾಗಿ ಪರಿಶೀಲಿಸಿದರೂ,—ಅಲ್ಲಿಯ ಕಥಾವಿಸ್ತಾರ, ಮಾನವನ ಹೃದಯದ ತಳವನ್ನೂ ಮಹೋನ್ನತಿಯ ತುದಿಯನ್ನೂ ಕಾಣಿಸುವ ಪಾತ್ರಸೃಷ್ಟಿ, ಅಲ್ಲಿಯ ವೈರ, ಸ್ನೇಹ, ಜೀವನಸಮಸ್ಯೆ—ಇದೆಲ್ಲ ಭರತಖಂಡದಲ್ಲಿ ಮಾತ್ರವಲ್ಲ, ಜಗತ್ತಿನಲ್ಲಿಯೇ ಬೇರೆ ಯಾವ ಇತಿಹಾಸ ಕಥೆಯಲ್ಲಿ ಸಿಕ್ಕುತ್ತದೆ! ಜೈನರಲ್ಲೂ 'ಹರಿವಂಶಪುರಾಣ'ದ ಅಂಗವಾಗಿ ಬರುವ ಒಂದು ಭಾರತಕಥೆಯುಂಟು; ಆದರೆ ಅದರ ಸರಣಿಯೇ ಬೇರೆ. ಅಲ್ಲಿ ವ್ಯಾಸಭಾರತದ ವಿಸ್ತಾರವಿಲ್ಲ, ಸ್ವಾರಸ್ಯವಿಲ್ಲ. ಪಂಪನು ಜೈನನಾಗಿದ್ದರೂ ವ್ಯಾಸಕಥೆಯನ್ನೇ ಅವಲಂಬಿಸಿದ್ದು ಅವನ ಉದಾರದೃಷ್ಟಿಯನ್ನು ತೋರಿಸುತ್ತದೆ—ಅವನು ನಿಜವಾದ ಕವಿಯೆಂಬುದನ್ನು ಸಾರುತ್ತದೆ.

ವೈದಿಕಧರ್ಮದವರಲ್ಲಿ ಮಹಾಭಾರತಕ್ಕಿರುವ ಪೂಜ್ಯತೆಯೇ ಜೈನರಲ್ಲಿ ಮಹಾಪುರಾಣಕ್ಕೆ ಇರುವಂತೆ ತೋರುತ್ತದೆ. ತೀರ್ಥಂಕರರು, ಚಕ್ರವರ್ತಿಗಳು ಮೊದಲಾದ ಅರುವತ್ತುಮೂರು ಮಂದಿ ಜೈನ 'ಶಲಾಕಾಪುರುಷ'ರ ಕಥೆಯನ್ನು ಜನ್ಮಾಂತರ ಸಂಗತಿಗಳೊಡನೆ ಸಂಪ್ರದಾಯಕ್ಕನುಸಾರವಾಗಿ ನಿರೂಪಿಸತಕ್ಕ ಸಂಸ್ಕೃತಗ್ರಂಥವೇ 'ಮಹಾಪುರಾಣ.' ಇದು ಗುರುಶಿಷ್ಯರಿಬ್ಬರ ಕೃತಿ. ನೃಪತುಂಗ ಚಕ್ರವರ್ತಿಯ (ಕ್ರಿ.ಶ. ೮೧೪-೮೭೭) ಗುರುಗಳಾದ ಜಿನಸೇನಾಚಾರ್ಯರು ಇದರ ಮೊದಲಿನ ೪೨ ಪರ್ವಗಳನ್ನು ರಚಿಸಿ ಕಾಲಾಧೀನರಾದ ಬಳಿಕ ಅವರ ಶಿಷ್ಯರಾದ ಗುಣಭದ್ರಾಚಾರ್ಯರು ಗ್ರಂಥವನ್ನು ಪೂರ್ಣಗೊಳಿಸಿದರು. ಮಹಾಪುರಾಣದಲ್ಲಿ ಜೈನತೀರ್ಥಂಕರರೆಲ್ಲರ ಚರಿತ್ರೆಯೂ ಬಂದಿದೆ; ಆದರೆ ಮಿಕ್ಕ ಇಪ್ಪತ್ತುಮೂವರ ಕಥೆ ಒಂದು ತೂಕವಾದರೆ ಆದಿತೀರ್ಥಂಕರನಾದ ವೃಷಭಸ್ವಾಮಿಯದೇ ಒಂದು ತೂಕ. ಇದು ಮಹಾಪುರಾಣದಲ್ಲಿ ೪೭ ಪರ್ವಗಳನ್ನು, ಎಂದರೆ

ಅರ್ಥಕ್ಕೆ ಹೆಚ್ಚಿನ ಭಾಗವನ್ನು, ಆಕ್ರಮಿಸಿ ' ಪೂರ್ವಪುರಾಣ ' ವೆಂಬ ಪ್ರತ್ಯೇಕವಾದ ಹೆಸರನ್ನು ಕೂಡ ಪಡೆದಿದೆ. ಇದರ ಗಂಭೀರವಾದ ಕಾವ್ಯಶೈಲಿಯನ್ನು ಪಂಪನು ಮೆಚ್ಚಿ, ಆ ಮೇಲ್ಪಂಕ್ತಿಯನ್ನೇ ತನ್ನ ' ಆದಿಪುರಾಣ 'ದಲ್ಲಿ ಅನುಸರಿಸಿದನು.

ಆದಿಪುರಾಣ ವಿಕ್ರಮಾರ್ಜುನವಿಜಯಗಳೆರಡರಲ್ಲೂ ಹೀಗೆ ಪಂಪನು ಕಾವ್ಯಕ್ಕೆ ಮಹಾವಸ್ತುಗಳನ್ನೇ ಆರಿಸಿಕೊಂಡಿದ್ದಾನೆ; ಈ ಅಗಾಧಕಾರ್ಯಕ್ಕೆ ತಕ್ಕ ನಮ್ರತೆಯನ್ನೂ ತೋರ್ಪಡಿಸಿದ್ದಾನೆ. ' ಆನ್ ಧೃಷ್ಟನೆನ್- ; ಈ ಕಥಾಬ್ಧಿಯುಮನೇನ್- ಈಸಲ್ ಮನಂದಂದೆನೋ ' ಎಂದು ಒಂದರಲ್ಲೂ, ' ವ್ಯಾಸ ಮುನೀಂದ್ರ ರುಂದ್ರವಚನಾಮೃತವಾರ್ಧಿಯನೀಸುವೆಂ; ಕವಿ ವ್ಯಾಸನೆನ್- ಎಂಬ ಗರ್ವಮೆನಗಿಲ್ಲ ' ಎಂದು ಇನ್ನೊಂದರಲ್ಲೂ ಪೀಠಿಕಾಭಾಗದಲ್ಲೇ ವಿನಯದ ಮಾತುಗಳು ಬಂದಿವೆ. ಪಂಪನು ಈ ಎರಡು ಸಾಗರಗಳನ್ನೂ ಈಜಿ ಆಚೆಯ ತಡಿಗೆ ಸೇರಿದ ಬಗೆಯನ್ನು ಇನ್ನು ಗಮನಿಸೋಣ.

---

## ೨. ಆದಿಪುರಾಣ

ಆದಿಪುರಾಣದಲ್ಲಿ ಎರಡು ಫಲಗಳನ್ನು ಜೊತೆಜೊತೆಗೇ ಸಾಧಿಸಬೇಕೆಂದು ಪಂಪನ ಪ್ರಯತ್ನ: ' ನೆಗಳ್ದ- ಆದಿಪುರಾಣದೊಳ್- ಅಱಿ೦ವುದು ಕಾವ್ಯಧರ್ಮಮುಂ ಧರ್ಮಮುಮಂ ' ಎಂದು ಅದರ ಪ್ರಾರಂಭದಲ್ಲಿ ಅವನೇ ಹೇಳಿದ್ದಾನೆ. ಧರ್ಮವು ಅಗತ್ಯವಾಗಿ ಕಾವ್ಯದ ತಿರುಳಾಗಬಹುದು; ರಸವುಕ್ಕುವಂತೆ ಅದನ್ನು ನಿರೂಪಿಸಲೂಬಹುದು. ಆದರೆ ಎಷ್ಟೋ ವೇಳೆ ಧರ್ಮದ

ಹೆಸರಿನಲ್ಲಿ ವ್ಯಾಖ್ಯಾನಗಳೂ ಮತವಿಚಾರಗಳೂ ತಲೆಹಾಕಿ ಕಾವ್ಯರಸವನ್ನು ಬತ್ತಿಸುತ್ತವೆ. ಪಂಪನ ಆದಿಪುರಾಣಕ್ಕೂ ಈ ದೂರು ತಪ್ಪಿಲ್ಲ.

ಹೀಗಾಗುವುದಕ್ಕೆ ಮುಖ್ಯವಾದ ಕಾರಣವು ಜೈನಪುರಾಣದ ಸ್ವರೂಪದಲ್ಲೇ ಇದೆ. ಅದರಲ್ಲಿ, ಲೋಕದೇಶಾದಿ ವಿಭಾಗ ಗಳು, ತಪೋಮಹಿಮೆ, ಜನ್ಮಾಂತರ ಕಥೆಗಳು, ತೀರ್ಥಂಕರನಿಗೆ ಕೊನೆಯ ಜನ್ಮದಲ್ಲಿ ನಡೆಯುವ 'ಪಂಚಮಹಾಕಲ್ಯಾಣ'ಗಳು, ಅವನು ಮಾಡಿದ ಧರ್ಮೋಪದೇಶ—ಈ ಮೊದಲಾದುವನ್ನೆಲ್ಲಾ ಜೈನಸಂಪ್ರದಾಯಕ್ಕೆ ಅನುಸಾರವಾಗಿ ಕವಿ ವರ್ಣಿಸಲೇಬೇಕು. ಪಂಪನಿಗೆ ಆಧಾರಗ್ರಂಥವಾಗಿದ್ದ ಸಂಸ್ಕೃತ ' ಪೂರ್ವಪುರಾಣ ' ದಲ್ಲಿ ಈ ಅಂಶಗಳೆಲ್ಲಾ ತುಂಬ ವಿಸ್ತಾರವಾಗಿ ಬಂದಿವೆ. ತನ್ನ ಕಾವ್ಯವು ಜೈನಧರ್ಮದ ಕೈಪಿಡಿಯೂ ಆಗಬೇಕಾಗಿದ್ದುದರಿಂದ ಪಂಪನು ಅವನ್ನು ಕೈಬಿಡದೆ ಸಂಗ್ರಹಿಸಬೇಕಾಯಿತು. ಕಥೆ ಹೇಳುವುದರಲ್ಲಿ ಕೂಡ ಅವನು ಸಂದರ್ಭಗಳನ್ನು ವ್ಯತ್ಯಾಸ ಮಾಡುವ ಹಾಗಿರಲಿಲ್ಲ; ತನ್ನ ಕಲ್ಪನಾಶಕ್ತಿಗೆ ಎಡೆಗೊಡುವು ದಕ್ಕಾಗಿ ಸಂಪ್ರದಾಯವನ್ನು ಮೀರುವ ಹಾಗಿರಲಿಲ್ಲ. ಆದ ಕಾರಣ, ಆದಿಪುರಾಣ ರಚನೆಯಲ್ಲಿ ಪಂಪನು ಕೈಕಟ್ಟಿಸಿಕೊಂಡು ಪಟ್ಟುಗಳನ್ನು ತೋರಿಸುವ ಗರಡಿಯಾಳಿನಂತೆ ಕಾಣಿಸುತ್ತಾನೆ.

ಜಿನಸೇನರ ಪೂರ್ವಪುರಾಣಕ್ಕೆ ಪಂಪನು ಹೊತ್ತಿರುವ ಸಾಲವನ್ನು ಮೊದಲೇ ಒಪ್ಪಿಕೊಂಡುಬಿಡುವುದು ಉತ್ತಮ. ಕಥಾಸರಣಿಯನ್ನು ಮಾತ್ರವಲ್ಲ, ಎಷ್ಟೋ ಭಾವಗಳನ್ನು ಕೂಡ ಅವನು ಅಲ್ಲಿಂದಲೇ ಸ್ವೀಕರಿಸಿದನು. ಪಂಪನ ಕಾವ್ಯದ ಎಷ್ಟೋ ಪದ್ಯಗಳೂ ವಚನಖಂಡಗಳೂ—ಕೆಲವು ಉತ್ತಮವಾದ ಪದ್ಯ ಗಳು ಕೂಡ—ಪೂರ್ವಪುರಾಣದ ಭಾಗಗಳ ಅನುವಾದದಂತಿವೆ. ಸಂಸ್ಕೃತ ಮಹಾಕೃತಿಯೊಂದರ ಸಾರವನ್ನು ಕನ್ನಡದಲ್ಲಿ ಭಟ್ಟಿ

ಯಿಳಿಸುವುದು ಹೇಗೆಂಬುದಕ್ಕೆ ನಿದರ್ಶನವಾಗಿ ಆದಿಪುರಾಣ ಹುಟ್ಟಿದಂತಿದೆ. ಇಷ್ಟನ್ನು ಹೇಳಿದ ಬಳಿಕ, ಪಂಪನ ಪರವಾಗಿ ಈ ಮಾತುಗಳನ್ನೂ ಹೇಳಬೇಕು. ಪೂರ್ವಪುರಾಣದ್ದು ಅತಿ ವಿಸ್ತಾರದ ಧಾಟಿ; ಮಾತೆತ್ತಿದರೆ ಮತಪ್ರಕ್ರಿಯೆ ದೀರ್ಘವಾಗಿ ಬರುತ್ತದೆ; ಅದರ ಧಾರ್ಮಿಕಸಂಗತಿಗಳಲ್ಲಿ ಕಾವ್ಯವಾಹಿನಿ ಎಷ್ಟೋ ವೇಳೆ ಅದೃಶ್ಯವಾಗಿಬಿಡುತ್ತದೆ. ಆದಿಪುರಾಣದಲ್ಲಾದರೆ ಈ ಅಂಶಗಳೆಲ್ಲ ಸಂಗ್ರಹವಾಗಿ ಬಂದಿವೆ; ಮರಳು ನೆಲ ಇಲ್ಲೂ ಒಮ್ಮೊಮ್ಮೆ ಕಾಣಿಸಿಕೊಂಡರೂ ಕಾವ್ಯದ ಹೊಳೆ ಆ ಜಾಗದಲ್ಲಿ ಕೂಡ ಒಂದು ರೇಖೆಯಷ್ಟಾದರೂ ಮಿಂಚುತ್ತದೆ. ಅಲ್ಲದೆ, ಪಂಪನ ಸ್ವತಂತ್ರ ಪ್ರತಿಭೆಯಿಂದಲೇ ಚಿಮ್ಮಿದ ಉತ್ಕೃಷ್ಟ ಕಾವ್ಯಧಾರೆಯೂ ಇಲ್ಲಿ ಬೇಕಾದಷ್ಟು ಉಂಟು.

ಆದಿಪುರಾಣದ ಕೆಲವು ನೀರಸವಾದ ಸಂಗತಿಗಳನ್ನೂ ವಿವರಣೆಗಳನ್ನೂ ಬಿಟ್ಟರೆ ಅದೊಂದು ಉತ್ತಮ ಕಾವ್ಯವಾಗುತ್ತದೆ. ಇದರಲ್ಲಿ ಪಂಪನು ಜೈನಧರ್ಮದ ಒಳತಿರುಳನ್ನು ರಮ್ಯವಾಗಿ ನಿರೂಪಿಸಿದ್ದಾನೆ. ಇಲ್ಲಿ ಬರುವ ಬೇರೆ ಬೇರೆ ಕಥೆಗಳೆಲ್ಲ ಒಂದು ಮುಖ್ಯೋದ್ದೇಶಕ್ಕೆ ಅಧೀನವಾಗಿ ಹೆಣೆದುಕೊಂಡು, ಕಾವ್ಯದ ಜೀವವಾದ ರಸೈಕ್ಯವನ್ನು ಸಾಧಿಸುತ್ತವೆ. ಈ ಮೂಲ ಸೂತ್ರವು ಪೂರ್ವಪುರಾಣದಲ್ಲಿ ಇಲ್ಲವೆಂದಲ್ಲ; ಆದರೆ ಅದರ ಸ್ವರೂಪ ಎದ್ದು ಕಾಣುವಂತೆ, ವಾಚಕರಿಗೆ ಹೃದ್ಯವಾಗುವಂತೆ ರಚಿಸಿದ ಯಶಸ್ಸು ಪಂಪನಿಗೆ ಸಲ್ಲಬೇಕು.

ಮಾನವನ ಸಹಜಪ್ರವೃತ್ತಿ ಭೋಗದ ಕಡೆಗೆ. ಇತ್ತ, ವಿಷಯಸುಖದಲ್ಲಿ ವ್ಯಾಮೋಹಗೊಂಡು ಅದನ್ನು ಪಡೆಯುವುದಕ್ಕಾಗಿ ಸಂಸಾರದಲ್ಲಿ ತೊಳಲುತ್ತಾನೆ; ಅತ್ತ, ಕೀರ್ತಿವೈಭವಗಳಿಗೆ ಬೆರಗಾಗಿ ಅವನ್ನು ಸಾಧಿಸಲು ಮುನ್ನುಗ್ಗುತ್ತಾನೆ. ಇದೆಲ್ಲವನ್ನು ಪಡೆದರೂ ಅವನಿಗೆ ಉಳಿಯುವುದು—ಅತೃಪ್ತಿ.

ದೊರೆತ ರಸ ಅವನ ಬಾಯಾರಿಕೆಯನ್ನು ಇಂಗಿಸುವುದಿಲ್ಲ; ಇನ್ನಷ್ಟು ಹೆಚ್ಚಿಸುತ್ತದೆ. ಇದರ ಮೇಲೆ, ಪಡೆದ ಭೋಗಗಳಾದರೂ ನೆಲೆಗೊಂಡು ನಿಲ್ಲುತ್ತವೆಯೆ? ನೋಡನೋಡುತ್ತಿದ್ದ ಹಾಗೆಯೇ ಕೈಯಲ್ಲೇ ಕರಗಿಬಿಡುತ್ತವೆ. ಭೋಗದ ಕೊನೆ ತ್ಯಾಗವೆಂದು, ವೈಭವದ ಕೊನೆ ವೈರಾಗ್ಯವೆಂದು ಮನವರಿಕೆಯಾಗುವ ವರೆಗೆ ಜೀವನಿಗೆ ಮುಕ್ತಿಯಿಲ್ಲ. ಈ ತತ್ತ್ವವು ಹಿಂದೂದೇಶದ ವೈದಿಕ-ಅವೈದಿಕ ದರ್ಶನಗಳೆಲ್ಲಕ್ಕೂ ಒಟ್ಟಿನ ಮೇಲೆ ಸಮಾನವಾಗಿದ್ದರೂ ತೀವ್ರತಪಶ್ಚರ್ಯವನ್ನು ಬೋಧಿಸುವ ಜೈನದರ್ಶನದಲ್ಲಿ ಇದಕ್ಕೆ ಹೆಚ್ಚಿನ ಪ್ರಾಶಸ್ತ್ಯವುಂಟು. ಪ್ರತಿಯೊಬ್ಬ ಜೈನತೀರ್ಥಂಕರನ ಚರಿತ್ರೆಯೂ ಸಂಸಾರದ ಅಸಾರತೆಯನ್ನೂ ಸಂನ್ಯಾಸದ ಮಹತ್ತ್ವವನ್ನೂ ಬೋಧಿಸುತ್ತದೆ. ಈ ತತ್ತ್ವ ಮಿಕ್ಕೆಲ್ಲ ಕಡೆಗಿಂತ ರಮ್ಯವಾಗಿ ಕಾವ್ಯಮಯವಾಗಿ ರೂಪುಗೊಂಡಿರುವುದು ಆದಿತೀರ್ಥಂಕರನ ಚರಿತ್ರೆಯಲ್ಲಿ.

ಆದಿನಾಥನು ತಪಸ್ಸಿನಿಂದ ಧರ್ಮಾಮೃತವನ್ನು ಸಾಧಿಸಿ ಲೋಕಕ್ಕೆಲ್ಲ ಮಳೆಗರೆದ ವೈರಾಗ್ಯಮೂರ್ತಿ. ಈ ಪರಿಪಾಕವನ್ನು ಪಡೆಯುವುದಕ್ಕೆ ಅವನ ಜೀವ ಎಷ್ಟೋ ಜನ್ಮಗಳನ್ನು ಎತ್ತಬೇಕಾಯಿತು. ನಾಟಕದ ದೃಶ್ಯಗಳಂತೆ ಈ ಜನ್ಮಗಳು ಒಂದನ್ನೊಂದು ಹಿಂಬಾಲಿಸುತ್ತವೆ. ಹಿಂದೆ ಜಯವರ್ಮನೆಂಬ ರಾಜಪುತ್ರನಾಗಿ ಹುಟ್ಟಿದ್ದಾಗ ಈ ಜೀವನಿಗೆ ತೀವ್ರವಾದ ಭೋಗಾಸಕ್ತಿ ಹೇಗೆ ಉಂಟಾಯಿತು, ಅದರ ವಾಸನೆ ಜನ್ಮಜನ್ಮಕ್ಕೂ ಹೇಗೆ ಬೆನ್ನುಹತ್ತಿತು, ಧರ್ಮಶ್ರದ್ಧೆ ಯಾವಾಗ ಹುಟ್ಟಿತು, ವಿಷಯಾಸಕ್ತಿ ಹೇಗೆ ಸಡಿಲಿತು, ವೈರಾಗ್ಯ ಹೇಗೆ ಬಲಿಯಿತು—ಎಂಬ ಸೂತ್ರ ಈ ಕಥೆಗಳಿಗೆಲ್ಲಾ ಏಕಮುಖವಾದ ಹೊಂದಿಕೆಯನ್ನು ಕೊಡುತ್ತದೆ. ತೀರ್ಥಂಕರನಿಗೆ ಬೇರೆ ಬೇರೆ ಜನ್ಮಗಳಲ್ಲಿ ಸಂಬಂಧಪಟ್ಟಿದ್ದವರ ಭವಾವಳಿಗಳೂ ಇವು

ಗಳೊಂದಿಗೆ ಹೆಣೆದುಕೊಂಡು ಮೂಲತತ್ತ್ವವನ್ನೇ ಪುಷ್ಟಿಗೊಳಿಸುತ್ತವೆ. ಇಲ್ಲಿ ನಾವು ಆದಿನಾಥನ ಪೂರ್ವಕಥೆಯ ಒಂದೆರಡು ಸಂಗತಿಗಳನ್ನು ಮಾತ್ರ ನೋಡುವುದು ಸಾಧ್ಯ.

ಆದಿನಾಥನು ಹಿಂದೆ ಲಲಿತಾಂಗದೇವನಾಗಿ ದೇವಭೂಮಿಯಲ್ಲಿ ಹುಟ್ಟಿದ್ದಾಗ ಅವನಿಗೆ ಸ್ವಯಂಪ್ರಭೆಯೆಂಬ ಪ್ರಿಯೆ ಒದಗಿದಳು. ಆ ಮನೋಮೋಹನೆಯ ಸೊಬಗನ್ನು ವರ್ಣಿಸುವುದು ಪಂಪನಿಗೂ ಅಸದಳವೆನಿಸುತ್ತದೆ;—

ನೆಗಟ್ದ ಮರಾಂಗನಾಜನದ ರೂಪುಗಳೆಲ್ಲಂ- ಅದು- ಈಕೆಯೊಂದು ದೇ-
ಸೆಗೆ ಸಿಮಿರ್ಪೊಂದು ಪುರ್ವಿನ ನಯಕ್ಕೆ[1]-, ಅಮರ್ಪೊಂದದಗುಂತಿಗೆ[2]-,
ಒಂದು ಭಂ-
ಗಿಗೆ, ನೆಗಟ್ಪೊಂದು ಮೆಲ್ಪಿನ ತೊದಳ್ನುಡಿಗಪ್ಪುಡಂ- ಎಯ್ದೆ ವಾರವು[3]-ಏ-
ನೊಗಸುಗ[4] ಪೇಳ್ವುದು ತಳ್ತು[5]- ಅಗಲದ - ಆಕೆಯುಮಾ ಲಲಿತಾಂಗವಲ್ಲಭಂ.

ತಾನು ದೇವಲೋಕದಲ್ಲಿ ಹುಟ್ಟಿದ್ದು ಈ ಸ್ವಯಂಪ್ರಭೆಯ ನಲ್ಮೆಯಿಂದ ಸಾರವತ್ತಾಯಿತೆಂದು ಲಲಿತಾಂಗನು ಭಾವಿಸುತ್ತಾನೆ. ಆದರೆ ಈ ಸುಖ ಎಷ್ಟು ದಿನ! ಜೈನಜಗತ್ತಿನಲ್ಲಿ ದೇವತೆಗಳು ಹೆಸರಿಗೆ ಮಾತ್ರ ಅಮರರು; ಮಿಕ್ಕವರಂತೆ ಅವರಿಗೂ ಮರಣವುಂಟು. ಲಲಿತಾಂಗನು ಮುಡಿದಿದ್ದ ಹೂವಮಾಲೆ ಬಾಡಿತು, ಅವನ ದೇಹಕಾಂತಿ ಮಸಕಾಯಿತು ;—ಇನ್ನು ಆರು ತಿಂಗಳಿಗೆ ಅವನ ಕೊನೆಯೆಂಬ ಸೂಚನೆ ಮುಟ್ಟಿತು. ಸುರಭೋಗವನ್ನು ಬಿಡಲಾರದೆ ಅವನು ನನ್ನನ್ನು ಉಳಿಸಿಕೊಳ್ಳಿರೆಂದು ಯಾರು ಯಾರಿಗೋ ಅಂಗಲಾಚುತ್ತಾನೆ; ಶರೀರಗಳು ಎರಡಾದರೂ ಒಂದೇ ಪ್ರಾಣವೆಂಬಂತಿದ್ದ ತನ್ನ ಪ್ರಿಯೆಗೆ ಮೊರೆಯಿಡುತ್ತಾನೆ.

[1] ಸಿಮಿರ್ಪೊಂದು ಪುರ್ವಿನ ನಯಕ್ಕೆ—ಹುಬ್ಬು ಹಾರಿಸುವ ಒಂದು ನಯಕ್ಕೆ; [2] ಅದಗುಂತಿಗೆ— ಅತಿಶಯಕ್ಕೆ ; [3] ಎಯ್ದೆ ವಾರವು—ಹತ್ತಿರಕ್ಕೂ ಬರುವುದಿಲ್ಲ; [4] ಏನ್ ಒಗಸುಗಂ— ಏನು ವಿಶೇಷ(?); [5] ತಳ್ತು — ಸೇರಿ.

ಆದರೆ ಅವನನ್ನು ಅಂತಕನ ಕೈಯಿಂದ ಬಿಡಿಸುವವರು ಯಾರು? ಅಂತಕನಿಗೇ ಮೊದಲು ಆ ಅಧಿಕಾರವಿಲ್ಲ:

ನಿನಗೊರ್ವಂಗಲ್ಲವಸ್ಥಾಂತರಂ, ಅವುರಜನಕ್ಕೆಲ್ಲಮಿಾ ಪಾಂಗೆ[1]. ಕಾರು-
ಣ್ಯನಿಸಾದಂ ನಿನ್ನನ್- ಆದಂ[2] ನಗಿಸುಗುಂ. ಎಡೆಯುಮುಯ್ವಂತಕಂಗಿಲ್ಲ,
ದೇವಾಂ-
ಗನೆಯರ್ ಮಾಱಾಂಪರೇ[3], ಪೇೞ್! ಜನನ ಮೃತಿ ಜರಾತಂಕ ಶೋಕಾ-
ಗ್ನಿಯಿಂದೆ- ಅ-
ವನುಮಿಾ ಸಂಸಾರದೊಳ್ ಬೇಯದನ್- ಒಳನೆ! ಶರಣ್ ಧರ್ಮ-
ದಿಂದೆ- ಒಂದುಮುಂಟೇ!

ಎಂದು ಅವನ ಜೊತೆಯ ದೇವತೆಗಳು ಎಚ್ಚರಿಸಿದರು. ಬಳಿಕ ಲಲಿತಾಂಗನು ತನ್ನ ಜೀವಿತದ ಮಿಕ್ಕ ಕಾಲವನ್ನು ಜಿನಾರ್ಚನೆಯಲ್ಲಿ ಕಳೆದು, ಶರತ್ಕಾಲದ ಮೋಡದಂತೆ ಕರಗಿಹೋಗಿ ವಜ್ರಜಂಘನೆಂಬ ವಿದ್ಯಾಧರಕುಮಾರನಾಗಿ ಹುಟ್ಟುತ್ತಾನೆ.

ಇತ್ತ ಅವನನ್ನು ಕಳೆದುಕೊಂಡ ಸ್ವಯಂಪ್ರಭೆ ಕಂಗೆಟ್ಟು, '....ಎರ್ದೆಯಾಣ್ಮನೆನ್ನರಸನೆಲ್ಲಿದನೋ ಲಲಿತಾಂಗವಲ್ಲಭಂ!' ಎಂದು ಹಲುಬುತ್ತಾ, ಕೊನೆಗೆ ತಾನೂ ಜಿನಧ್ಯಾನದಲ್ಲಿ ಕಾಲ ಕಳೆದು, ಶ್ರೀಮತಿಯೆಂಬ ರಾಜಕುಮಾರಿಯಾಗಿ ಹುಟ್ಟುತ್ತಾಳೆ. ಹಳೆಯ ವಾಸನೆಗಳು ಜನ್ಮಾಂತರಕ್ಕೆ ಹಿಂಬಾಲಿಸಿ ಬರುವಂತೆ ಹಳೆಯ ಸಂಬಂಧಗಳೂ ಈ ವಜ್ರಜಂಘ ಶ್ರೀಮತಿಯರನ್ನು ಹಿಂಬಾಲಿಸುತ್ತವೆ. 'ಭವದಿಂದಂ ಭವದೊಳ್ ತಗುಳ್ದು[4] ಪರಮಸ್ನೇಹಂಗಳಿಂತೀಗಳ್- ಇಲ್ಲಿವರಂ ಬಂದುವು.' ಒಬ್ಬರನ್ನೊಬ್ಬರು ಪ್ರಸಂಗಾಂತರದಿಂದ ಸಂಧಿಸಿ, ನಲ್ಲನಲ್ಲೆಯರಾಗಿ ಮತ್ತೆ ಕೂಡಿದರು. ತನ್ನ ಜೀವ ಬಯಸುತ್ತಿದ್ದ ಭೋಗಗಳೆಲ್ಲವನ್ನೂ

---

[1] ಈ ಪಾಂಗೆ—ಈ ರೀತಿಯೋ; [2] ಆದಂ—ವಿಶೇಷವಾಗಿ; [3] ಮಾಱಾಂಪರೇ—ಪ್ರತಿಭಟಿಸಿ ನಿಲ್ಲುತ್ತಾರೆಯೋ? [4] ತಗುಳ್ದು—ಹಿಂಬಾಲಿಸಿ.

ವಜ್ರಜಂಘನು ಶ್ರೀಮತಿಯೊಂದಿಗೆ ಬಹುಕಾಲ ಅನುಭವಿಸಿದನು. ಹೀಗಿರುವಲ್ಲಿ ಒಂದು ರಾತ್ರಿ ಸೆಜ್ಜೆಯ ಮನೆಯಲ್ಲಿ ಈ ದಂಪತಿಗಳು ಮಲಗಿರುವಾಗ ಒಂದು ಸಂಗತಿ ನಡೆಯಿತು. ಕೇಶಸಂಸ್ಕಾರಕ್ಕೆಂದು ಅಗ್ಗಿಷ್ಟಿಕೆಯಲ್ಲಿ ಸುವಾಸನೆಯ ಧೂಪ ದ್ರವ್ಯವನ್ನು ಬೇಕಾದಷ್ಟು ಹಾಕಿ, ಸೆಜ್ಜೆವನೆಯ ಗವಾಕ್ಷಗಳನ್ನು ತೆರೆದಿಡುವುದನ್ನು ಸೆಜ್ಜೆವಳನು ಮರೆತುಬಿಟ್ಟಿದ್ದನು. ಇದರ ಫಲವಾಗಿ ಹೊಗೆ ಸುತ್ತಿಕೊಂಡು, ವಜ್ರಜಂಘ ಶ್ರೀಮತಿಯರು ಉಸಿರುಕಟ್ಟಿ ಪ್ರಾಣಬಿಟ್ಟರು :

**ಮೊದಲೊಳ್ ನೀಳ್ದು ಪೊದಳ್ದು[1] ಪರ್ಜಿ ಪದಪಂ ಕೈಕೊಂಡು[2] ಮುಂದ್ಯೈಸಿ[3] ಮಾಣದೆ, ತನ್ನಂಪದದೊಳೇಱ್ಗುಂದದೆ, ನಿರುದ್ಧೋಚ್ಛ್ವಾಸಮುಪ್ಪನ್ನೆಗಂ ಪುದಿದು-, ಆ ದಂಪತಿಯುಂ ಪುದುಂಗೊಳಿಸಿ[4] ಲೋಕಾಶ್ಚರ್ಯಮಂ ಮಾಡಿ ಕೊಂಡುದು ಕೃಷ್ಣಾಗರು ಧೂಪಧೂಮನಿವಹಂ ಕೃಷ್ಣೋರಗಂ ಕೊಲ್ವವೋಲ್!**

ಗವಾಕ್ಷಗಳನ್ನು ತೆರೆಯದೆ ಮರೆತದ್ದರಿಂದಲೇ ಇಷ್ಟು ಅನಾಹುತವಾಗಬಹುದೆ ? ಭೋಗದ ಸಾಮಗ್ರಿಯಾದ ಆ ಸುಗಂಧ ಧೂಮವು ಕೃಷ್ಣಸರ್ಪದಂತೆ ಈ ಭೋಗಿಗಳನ್ನು ಕೊಲ್ಲಬಹುದೆ? ದೀಪದ ಕುಡಿ ಆರುತ್ತಲೂ ಮನೆಯಲ್ಲಿ ಕತ್ತಲೆ ಹಬ್ಬುವಂತೆ, ಹಿಂದೆಲ್ಲ ತೊಳಗುತ್ತಿದ್ದ ಅವರ ಸುಂದರದೇಹಗಳು ಈಗ ನೋಡ ನೋಡುತ್ತಿದ್ದ ಹಾಗೆಯೇ ಕಪ್ಪುತಿರುಗಿದುವು! ಸಂಸಾರದ ಭೋಗಗಳೇ ಹೀಗೆ : ಹಾವಿನ ಹೆಡೆಯಂತೆ ಮೋಹಿಸಿ ಮುಟ್ಟಿ ಕೊಲ್ಲುತ್ತವೆ !

---

[1] ಪೊದಳ್ದು — ಹೊರಹೊಮ್ಮಿ ; [2] ಪದಪಂ ಕೈಕೊಂಡು — ಸ್ಫುರಣೆ ಹೊಂದಿ ; [3] ಮುಂದ್ಯೈಸಿ — ದಟ್ಟವಾಗಿ ; [4] ಪುದುಂಗೊಳಿಸಿ — ಒಡಗೂಡಿಸಿ.

ಈ ದುರಂತ ದೃಶ್ಯದಲ್ಲಿ ಕೂಡ, ಒಂದು ಸಾರವತ್ತಾದ ಅಂಶವು ಪಂಪನ ಗಮನವನ್ನು ಸೆಳೆದಿದೆ:

**ಬಿಡದೆ ಪೊಗೆ ಸುತ್ತೆ, ತೋಳಂ**
**ಸಡಿಲಿಸದಾ ಪ್ರಾಣವಲ್ಲಭರ್ ಪ್ರಾಣಮನ್- ಆಂ-**
**ದು- ಒಡಗಳೆದರ್: ಓಪರ್- ಓಪರ್ಗಳ್-**
**ಒಡಸಾಯಲ್ ಪಡೆದರ್!—ಇನ್ನವೇಂ ಸೈಪೊಳವೇ!**

ಆ ಪ್ರಾಣವಲ್ಲಭರು ಬಿಗಿದ ತೋಳನ್ನು ಸಡಿಲಿಸದೆ ಒಟ್ಟಿಗೇ ಪ್ರಾಣಬಿಟ್ಟರಂತೆ. "ಒಡಗೂಡಿ ಬಾಳಿದ ಪ್ರಿಯರು ಒಡಗೂಡಿ ಸಾಯುವುದರಂಥ ಪುಣ್ಯವುಂಟೇ!" ಎಂದು ಪಂಪನು ಕೇಳುತ್ತಾನೆ. ಈ ಪ್ರಶ್ನೆ ಅವನ ಮನೋಧರ್ಮವನ್ನು ಪ್ರತಿಬಿಂಬಿಸುವ ಕನ್ನಡಿ. ಈ ಸಜ್ಜೆವನೆಯ ಪ್ರಸಂಗದ ನಿರೂಪಣೆಯಲ್ಲಿ ಪಂಪನು ಪೂರ್ವಪುರಾಣವನ್ನೇ ಹೆಜ್ಜೆಹೆಜ್ಜೆಗೂ ಅನುಸರಿಸಿದ್ದರೂ, ಈ ಪದ್ಯ ಮಾತ್ರ ಸಂಪೂರ್ಣವಾಗಿ ಅವನದು; ಇದನ್ನು ಸ್ವಲ್ಪ ವ್ಯತ್ಯಾಸದೊಡನೆ ವಿಕ್ರಮಾರ್ಜುನವಿಜಯದಲ್ಲೂ (v. ೯೩) ಸೇರಿಸಿ, ಇದರ ಭಾವ ತನಗೆ ಬಲು ಮೆಚ್ಚಿಕೆಯಾದದ್ದೆಂಬುದನ್ನು ಸ್ಫುಟಪಡಿಸಿದ್ದಾನೆ.

ಹೀಗೆ ಅಪ್ರಯಾಸವಾಗಿ ಸಹಮರಣವನ್ನು ಹೊಂದಿದ ವಜ್ರಜಂಘ ಶ್ರೀಮತಿಯರ ಪ್ರೇಮಸಂಬಂಧ ಮುಂದಿನ ಜನ್ಮಕ್ಕೂ ತಪ್ಪಲಿಲ್ಲ; ಭೋಗಕಾಂಕ್ಷೆಯೂ ಮುಗಿಯಲಿಲ್ಲ. 'ಭೋಗಭೂಮಿ'ಯಲ್ಲೇ ಇವರು ಮತ್ತೆ ಹುಟ್ಟಿ ಸುಖವನ್ನು ಸವಿಯುತ್ತಿರುವಾಗ ಅಲ್ಲಿಗೆ ಆದಿನಾಥನ ಜನ್ಮಾಂತರದ ಗೆಳೆಯನೊಬ್ಬನು ಬಂದು ಕನಿಕರದಿಂದ ಎಚ್ಚರಿಸುತ್ತಾನೆ. (ಹಿಂದೊಮ್ಮೆ ಇವನಿಗೆ ಜಿನಧರ್ಮದಲ್ಲಿ ಅಭಿರುಚಿಯನ್ನು ಹುಟ್ಟಿಸಿದ್ದವನೂ ಈತನೇ.)—

'ನಿನಗೆ ಜಯವರ್ಮನಾದಂ-
ದಿನ ಭವದಿಂದಿತ್ತ ಭೋಗಕಾಂಕ್ಷೆಯ ತಿಣ್ಣಂ[1] ;
ಮನದೊಳ್ ಸಮ್ಯಕ್ತ್ವದ ದೆಸೆ-
ಯಿನಿಸಿಲ್ಲ ದಲ್-! ಅಮ್ಮ[2], ಕೈಕೊಳಲ್ಕಿದು ಕಾಲಂ.'

ಎಂದು ಬೋಧಿಸಿ, ಭೋಗತೃಷ್ಣೆಯನ್ನು ಸಡಿಲಿಸುತ್ತಾನೆ; ದಂಪತಿಗಳಿಬ್ಬರಿಗೂ ಸಮ್ಯಗ್ದರ್ಶನ[3]ವನ್ನು ಕೈಕೊಳಿಸುತ್ತಾನೆ.

ಮನೆಯಿಂದ ಮನೆಗೆ ಹೋಗುವಂತೆ ನಮ್ಮ ಕಥಾ ನಾಯಕನು ಬೇರೆ ಬೇರೆ ಜನ್ಮಗಳನ್ನೆತ್ತಿ, ಹೆಚ್ಚುಹೆಚ್ಚಿನ ಪರಿ ಪಾಕವನ್ನು ಹೊಂದಿದ ಕಥೆಯನ್ನು ಇಲ್ಲಿ ವಿವರಿಸಬೇಕಾಗಿಲ್ಲ. ಕಟ್ಟಕಡೆಗೆ ಅವನು ಭೂಮಿಯ ಮೇಲೆ ಹದಿನಾಲ್ಕನೆಯ ಮನುವಾದ ನಾಭಿರಾಜನಿಗೆ ವೃಷಭಸ್ವಾಮಿ ಅಥವಾ ಪುರುದೇವ ನೆಂಬ ಹೆಸರಿನ ಮಗನಾಗಿ ಕೊನೆಯ ಜನ್ಮವನ್ನೆತ್ತಿದನು. ಈ ವೇಳೆಗೆ ಅವನ ಭೋಗಾಸಕ್ತಿ ಕ್ಷೀಣವಾಗಿಬಿಟ್ಟಿರುತ್ತದೆ. ಅವನು ಸಂಸಾರದಲ್ಲಿ ಅಂಟಿಯೂ ಅಂಟದಂತೆ ಬಾಳಿ, ಸಂನ್ಯಾಸಕ್ಕೆ ಹೊರಡುವ ಕಾಲ ಒದಗಿತು. ಈ 'ಪರಿನಿಷ್ಕ್ರಮಣ' ಸಮಯ ದಲ್ಲಿ, ಅದಕ್ಕೆ ಹೊಂದಿಕೊಳ್ಳುವಂತೆ ಸಂಸಾರದ ಅನಿತ್ಯತೆಯನ್ನು ಅವನಿಗೆ ಕೊನೆಯ ಬಾರಿ ಮನಗಾಣಿಸುವ ಒಂದು ಸಂಗತಿ ನಡೆಯುತ್ತದೆ. ಆದಿಪುರಾಣದ ಸಾರವೇ ಇದೆಂದು ಬೇಕಾದರೂ ಹೇಳಬಹುದು ; ಪಂಪನು ಇದನ್ನು ಉಜ್ಜ್ವಲವಾದ ರೀತಿಯಲ್ಲಿ ನಿರೂಪಿಸಿದ್ದಾನೆ.

ಪುರುದೇವನು ಸಾಮಂತಗಣದ ನಡುವೆ ಸಭೆಯಲ್ಲಿರು ವಾಗ ಇಂದ್ರನು ಆತನನ್ನು ನಾಟ್ಯಪ್ರಸಂಗದಿಂದ ಓಲೈಸಬೇ ಕೆಂಬ ಭಕ್ತಿಯಿಂದ ಅಲ್ಲಿಗೆ ಬಂದನು. ಅವನ ಬಿನ್ನಹಕ್ಕೆ ಪುರು

---

[1] ತಿಣ್ಣಂ—ಕಠಿನ, ಪ್ರಬಲ ; [2] ಅಮ್ಮ—ಅಪ್ಪ !
[3] ಸಮ್ಯಗ್ದರ್ಶನ—ಜೈನಧರ್ಮದಲ್ಲಿ ದೃಢವಾದ ನಂಬಿಕೆ.

ದೇವನು ‘ ನಿಮಗೆ ಯಾವುದು ಸಂತೋಷವೋ ಅದಾಗಲಿ ’ ಎಂದು ಮುಗುಳುನಗೆಯೊಡನೆ ಸಮ್ಮತಿಕೊಡಲು, ದಿವ್ಯಸಂಗೀತ ಮೊದಲಾಯಿತು. ಬಳಿಕ, ನೀಳಾಂಜನೆಯೆಂಬ ಅಮರನರ್ತಕಿ ಮುಂದೆ ಬಂದಳು :

ಎನಿಸಿದ ನೀಳಾಂಜನೆ ಕ-
ರ್ಬಿನ ಬಿಲ್ಲಿಂ ಮಸೆಸ ಮದನನ ಕಣೆ[1] ಬದಿರ್ಕಿ-
ತ್ತೆ[2] ನಿಸುತ್ತೆ- ಒಳಪೊಕ್ಕಳ್ ಭೋಂ-
ಕೆನೆ ನಿಖಿಳಜನಾಂತರಂಗಮುಂ ರಂಗಮುಮಂ....

ತೆರೆ ಸರಿಯಿತು; ಮದನನೂ ಸಜ್ಜಾದನು. ನೀಳಾಂಜನೆಯ ನಾಟ್ಯದ ಬೆಡಗನ್ನು ಕೇಳಬೇಕೆ !—

ತಾಳದ ಲಯಮಂ ಸಿಟಿ[3], ನೀ-
ಳಾಳಕ[3], ಹಾರದ ಪೊದಳ್ದ ಮುತ್ತು- ಎಂಬಿವು ಮುಂ-
ಮೇಳಿಸಿ ಕೈಕೊಂಡುವು; ಲುಳಿ-
ತಾಳಕಿ[4] ಕೈಕೊಂಡಳೆಂಬುದೊಂದಚ್ಚರಿಯೋ !....

ಅವಳ ಅಭಿನಯದ ಹೊಸ ಸೊಗಸಿನಲ್ಲಿ ನಾಟ್ಯಾಗಮವೇ ಹೊಸದಾಯಿತು. ತನ್ನ ಹುಬ್ಬಿನ ಒಂದು ಚಲನೆಯಿಂದ ಅವಳು ಪಕ್ಕವಾದ್ಯಧವರಿಗೆ ಲಯವನ್ನು ಸೂಚಿಸುವಳು. ಒಂದು ಕಡೆಗೆ ಅವಳು ಕಣ್ಣು ತಿರುಗಿಸಿದರೆ ಅಲ್ಲಿ ಬೆಳುದಿಂಗಳು ತುಂಬಿದಂತಾಗುವುದು. ಸಭೆಗೆ ಬಂದಿದ್ದ ದೇವತೆಗಳಂತೆ ಮಾನವರೂ ಎವೆಯಿಕ್ಕದೆ ಅವಳ ಅಂಗಸೌಷ್ಠವವನ್ನು ನೋಡುವರು.

ಅವಯವದಿಂದಮೆ ದೇವಾಂ-
ಗವಸ್ತ್ರದುಳ್ಳುಡೆ[5]ಯುನ್- ಆಕೆಯೋಸರಿಸುವ, ಸೂ-

---

[1] ಕಣೆ — ಬಾಣ ; [2] ಬದಿರ್ಕಿತ್ತು — ಹೊರಜಿದ್ದಿತು. [3] ಸೀಳಾಳಕ — ಕಪ್ಪಾದ ಮುಂಗುರುಳು ; [4] ಲುಳಿತಾಳಕಿ — ಇಲ್ಲಿ, ನೀಳಾಂಜನೆ. [5] ಉಳ್ಳುಡೆ — ಒಳ ಉಡುಪು.

**ಸುವ ಹಾರಲತೆಯುನ್- ಅಳವಡಿ-**
**ಸುವ ಭಂಗಿಯೆ ಮದನರಾಜರಾಜ್ಯವಿಳಾಸಂ !**

ಇಂಥ ಮೋಹಿನಿಯ ನಾಟ್ಯದಿಂದ ಮಿಕ್ಕ ನೋಟಕರ ಮನಸ್ಸು ಸೂರೆಹೋಗುವ ಮಾತಿರಲಿ; ಅದು ಪುರುಪರಮೇಶ್ವರನ ಮನಸ್ಸನ್ನೂ ರಂಜಿಸಿತು—ಶುದ್ಧ ಸ್ಫಟಿಕದಲ್ಲಿ ಬೇರೊಂದು ವಸ್ತುವಿನ ಕಾಂತಿ ನಿರ್ಲೇಪವಾಗಿ ರಂಜಿಸುವಂತೆ.

ಹೀಗೆ ಜೀವನದ ಸುಖಸಾರವೇ ಇದೆಂಬಂತೆ ನೀಳಾಂಜನೆಯ ಅತಿಶಯ ನಾಟ್ಯವು ನಡೆಯುತ್ತಿರುವಾಗ, ಅದರ ನಡುವೆಯೇ ಅವಳ ಆಯುಸ್ಸು ಮುಗಿಯಿತು; ಮಿಂಚು ಹೊಳೆದು ಮರೆಯಾಗುವಂತೆ ಅವಳು ರಂಗಸ್ಥಳದಲ್ಲಿ ಇದ್ದಕ್ಕಿದ್ದಹಾಗೆ ಅದೃಶ್ಯೆಯಾದಳು. ಇದೆಲ್ಲವನ್ನೂ ಸೂತ್ರಧಾರನಾಗಿ ನಿಂತು ನೋಡುತ್ತಿದ್ದ, ಬಹುಶಃ ನಿರೀಕ್ಷಿಸಿದ್ದ, ಇಂದ್ರನು ರಸಭಂಗಕ್ಕೆ ಎಡೆಗೊಡದೆ ಅದೇ ಕ್ಷಣದಲ್ಲಿ ಅದೇ ರೀತಿಯ ಬೇರೊಂದು ಪಾತ್ರವನ್ನು ಅನುಸಂಧಿಸಿ, ನಾಟ್ಯ ನಿಲ್ಲದೆ ಮುಂದುವರಿಯುವಂತೆ ಮಾಡಿದನು. ಅಲ್ಲಿ ನೆರೆದಿದ್ದ ದೇವಮಾನವರಲ್ಲಿ ಯಾರಿಗೂ ಈ ರಹಸ್ಯದ ಅರಿವೇ ಆಗಲಿಲ್ಲ. ಆದರೆ ಪುರುದೇವನಿಗೆ ಮಾತ್ರ ತಿಳಿಯಿತು. ದೇಹ ಎಷ್ಟು ಅನಿತ್ಯವೆಂಬುದನ್ನು ಕಂಡು ಅವನು ಬೆರಗಾದನು; ಒಡನೆಯೇ ಗಾಢವೈರಾಗ್ಯ ಅವನ ಮನಸ್ಸಿನಲ್ಲಿ ನೆಲೆಗೊಂಡಿತು :

**ಕೋಟಿ ಕೆಱಿಎಂಡಮಸೆವೀ**
**ನಾಟಕಮಂ ತೋಱಿ ಮಾಣ್ದಿಳಿಲ್ಲಳ್[1] ; ಬಗೆಯೊಳ್**
**ನಾಟುವಿನಂ- ಅಮರಿ[2] ಸಂಸೃತಿ-**
**ನಾಟಕಮುಮನೆನಗೆ ನೆಱಿಯೆ ತೋಱಿದಳೀಗಳ್ !**

---

[1] ಮಾಣ್ದಿಳಿಲ್ಲಳ್—ಸುಮ್ಮನಾಗಲಿಲ್ಲ ; [2] ಅಮರಿ—ದೇವಾಂಗನೆ.

ತನು ರೂಪ ವಿಭವ ಯೌವನ-
ಧನ ಸೌಭಾಗ್ಯಾಯುರಾದಿಗಳ್- ಎಣೆ: ಕಂಡುಮಿಂ-
ಚಿನ ಪೊಳೆಪು ಮುಗಿಲ ನೆಟಿಲ್- ಇಂ-
ದ್ರನ ಬಿಲ್ ಬೊಬ್ಬುಳಿಕೆ[1] ಯೆಂಬ ಪರ್ಬಿದ ಭೋಗಂ!...

ಈ ಸುರನರ್ತಕಿಯಲ್ಲಿ ಚಿತ್ರವಿಚಿತ್ರವಾದ ಸರಸನಾಟ್ಯವನ್ನಲ್ಲದೆ ಸಂಸಾರನಾಟ್ಯವನ್ನೂ ಕಂಡು —ದೇಹ ರೂಪ ಮೊದಲಾದುವೆಲ್ಲ ಅತಿ ಚಂಚಲಗಳೆಂದು ಪುರುದೇವನು ಮನಗಂಡನು. ಎಲ್ಲ ಜನ್ಮಗಳಲ್ಲೂ ದುಃಖವೇ ತುಂಬಿ ತುಳುಕುವುದನ್ನು ದೃಢಮಾಡಿಕೊಂಡನು. ಕೊನೆಗಾಣದ ಸುಖತೃಪ್ತಿಗಳು ದೊರೆಯುವುದು ಮುಕ್ತಿಯಲ್ಲಿ ಮಾತ್ರ ಎಂದು ಅರಿತನು. ತಾನು ಇದುವರೆಗೂ ಎಷ್ಟು ಜನ್ಮಗಳನ್ನೆತ್ತಿದ್ದಾಯಿತು, ಎಷ್ಟು ಭೋಗಗಳನ್ನು ಸವಿದದ್ದಾಯಿತು, ಎಷ್ಟು ಆಸೆಗಳಲ್ಲಿ ನರಳಿದ್ದಾಯಿತು! ಇದಕ್ಕೆ ಕೊನೆ ಎಲ್ಲಿ!—

ಎನಿತಾನುಮಂಬುನಿಧಿಗಳನ್-
ಅನೇಕನಾಕಂಗಳಲ್ಲಿ ಕುಡಿದುಂ ಪೋಯ್ತು-
ಲ್ಲೆ ನಗೆ!— ನರಭೋಗಮೆಂಬೀ
ಪನಿಪುಲ್ಲಂ ನಕ್ಕೆ[2] ತೃಷ್ಣೆ ಪೇೞ್ ಪೋಪುದೇ!

ಎಲ್ಲ ಭೋಗವೂ ಭಂಗುರ, ಎಲ್ಲ ಸೊಬಗೂ ಅಸಾರ, ಎಲ್ಲ ಆಸೆಯೂ ಅಪಾರ ಎಂಬುದನ್ನು ಪುರುಪರಮೇಶ್ವರನು ಚೆನ್ನಾಗಿ ಮನಗಂಡನು. 'ಇನ್ ತಿರಿಯಲಾಱೆಂ[3] ಭವಾಂಭೋಧಿಯೊಳ್' ಎಂದು, ಸಂಸಾರಕ್ಕೆ ಬೇಸತ್ತು, ಭೋಗದ ಕಡೆ ಬೆನ್ನು ತಿರುಗಿಸಿ, ಮುಕ್ತಿಸಾಧನೆಗಾಗಿ ಪರಿನಿಷ್ಕ್ರಮಣವಮಾಡಿದನು.

---

[1] ಬೊಬ್ಬುಳಿಕೆ — ನೀರುಗುಳ್ಳೆ. [2] ಪನಿಪುಲ್ಲಂ ನಕ್ಕೆ —ಇಬ್ಬನಿಯ ಹನಿಯಿಂದ ಕೂಡಿದ ಹುಲ್ಲೆಸಳನ್ನು ನೆಕ್ಕಿದರೆ. [3] ತಿರಿಯಲಾಱೆಂ — ಸುತ್ತಲಾರೆನು.

ಇಲ್ಲಿಗೆ ಆದಿಪುರಾಣದ ಒಂದು ಘಟ್ಟ ಮುಗಿಯಿತು. ಪುರುದೇವನು ಉಗ್ರತಪಸ್ಸಿನಿಂದ ಕರ್ಮದ ಬೇರನ್ನು ಕತ್ತರಿಸಿ 'ಕೇವಲಜ್ಞಾನ'[1]ವನ್ನು ಸಂಪಾದಿಸುವುದೂ, ಆದಿತೀರ್ಥಂಕರನಾಗಿ ನಿಂತು ಧರ್ಮೋಪದೇಶಮಾಡಿ ಮುಂದೆ ಕಾಲವೊದಗಿದಾಗ 'ಪರಿನಿರ್ವಾಣ'[2] ಹೊಂದುವುದೂ ಆದಿಪುರಾಣದ ಕಥಾವಸ್ತುವಿನ ದೃಷ್ಟಿಯಿಂದ ಮುಖ್ಯವಾದರೂ ಅದನ್ನೆಲ್ಲಾ ಇಲ್ಲಿ ನಿರೂಪಿಸಲು ಸಾಧ್ಯವಿಲ್ಲ. ಆದಿನಾಥನ ಜನ್ಮಾವಳಿಯ ಕಥೆಗಳಲ್ಲಿ ಭೋಗದ ನಿರಾಸವನ್ನು ನೋಡಿದೆವು; ಇನ್ನು ವಿಭವದ ನಿಷ್ಫಲತೆಯನ್ನು ಅವನ ಹಿರಿಯ ಮಗನೂ ಪ್ರಥಮ ಚಕ್ರವರ್ತಿಯೂ ಆದ ಭರತನ ವೃತ್ತಾಂತದಲ್ಲಿ ನೋಡಬೇಕಾಗಿದೆ.

ಇದನ್ನು ಪಂಪನು ತುಂಬ ಜಾಣ್ಮೆಯಿಂದ ನಿರೂಪಿಸಿದ್ದಾನೆ; ಆದಿತೀರ್ಥಂಕರನ ಧರ್ಮದಿಗ್ವಿಜಯಕ್ಕೂ ಭರತ ಚಕ್ರವರ್ತಿಯ ಲೌಕಿಕ ದಿಗ್ವಿಜಯಕ್ಕೂ ಇರುವ ಭೇದವನ್ನು ಉದ್ದಕ್ಕೂ ಸ್ಪಷ್ಟಪಡಿಸಿದ್ದಾನೆ. ಆದಿನಾಥನು ಕೇವಲಜ್ಞಾನವನ್ನು ಪಡೆದ ಮೇಲೆ, ಧರ್ಮಾಮೃತವನ್ನು ಲೋಕಕ್ಕೆಲ್ಲಾ ಎರೆಯಲು ತನ್ನ ವಿಹಾರವನ್ನು ಕೈಕೊಂಡನು. ಈ ಧರ್ಮದಿಗ್ವಿಜಯದಲ್ಲಿ ದಯೆಯೇ ಎತ್ತಿದ ಧ್ವಜ, ಧರ್ಮವೇ ಗೆಲ್ಲುವ ಚಕ್ರಾಯುಧ, ಭವ್ಯಸಮೂಹವೇ ಒತ್ತಿನಡೆಯುವ ಸೇನೆ! ಕೊಲೆಯ ಲೇಪವಿಲ್ಲದ ಈ ಧರ್ಮದ ದಾಳಿಯಲ್ಲಿ ತೀರ್ಥಂಕರನಿಗೆ ತಾವಾಗಿಯೇ ಮಣಿಯುವವರು ಪಲರು!— ಭರತನ ದಿಗ್ವಿಜಯವಾದರೆ ಹೀಗೆ ಸಾಗಲಿಲ್ಲ. ತನ್ನ ಆಯುಧಶಾಲೆಯಲ್ಲಿ ಹುಟ್ಟಿದ ಭಯಂಕರವಾದ ಚಕ್ರರತ್ನವನ್ನು ಮುಂದಿಟ್ಟುಕೊಂಡು ಅವನು ಸಕಲ ಸೈನ್ಯದೊಡನೆ ದಾಳಿಯಿಡು

[1] ಕೇವಲಜ್ಞಾನ—ಸಂಪೂರ್ಣಜ್ಞಾನ; [2] ಪರಿನಿರ್ವಾಣ—ಮುಕ್ತಿ.

ತ್ತಾನೆ. ಅವನ ಪ್ರತಾಪಕ್ಕೆ ಹೆದರಿ ರಾಜರು ಪಾದಕ್ಕೆ ಬಿದ್ದು ಕಪ್ಪಕಾಣಿಕೆಗಳನ್ನು ಒಪ್ಪಿಸುತ್ತಾರೆ; ದ್ವೀಪನಿವಾಸಿಗಳು ಬೆವರಿ ಓಲೈಸುತ್ತಾರೆ; ಪರ್ವತಪ್ರಾಂತಗಳವರು ವಿನೀತರಾಗಿ ನಿಲ್ಲು ತ್ತಾರೆ. ಎಲ್ಲ ದಿಕ್ಕುಗಳಿಗೂ ಹರಿದು, ಹೋದ ಕಡೆಯಲ್ಲೆಲ್ಲಾ ಶತ್ರುಗಳನ್ನು ನಡುಗಿಸಿ ಭರತನು ವಿಜಯಶಾಲಿಯಾಗುತ್ತಾನೆ, ಷಟ್ಖಂಡಭೂಮಂಡಲಕ್ಕೆ ಒಡೆಯನಾಗುತ್ತಾನೆ. ಈ ಉಬ್ಬಿನಲ್ಲಿ ಅವನು ವೃಷಭಾಚಲಕ್ಕೆ ಬಂದು, ತನ್ನ ವಿಶ್ವವಿಜಯದ ಪ್ರಶಸ್ತಿ ಯನ್ನು ಅಲ್ಲಿ ಕೆತ್ತಿಸುವ ಆಸೆಯಿಂದ ನೋಡಿದರೆ—

**ಅದಱೊಳನೇಕ ಕಲ್ಪಶತಕೋಟಿಗಳೊಳ್ ಸಲೆ ಸಂದ ಚಕ್ರಿವೃಂ-**
**ದದ ಚಲದಾಯದಾಯತಿಯ ಬೀರದ ಚಾಗದ ಮಾತುಗಳ್ ಪೊದ-**
**ಳ್ದಿದವಿರೆ ತತ್ಪ್ರಶಸ್ತಿಗಳೊಳ್-, ಆತವನೊಯ್ಯನೆ ನೋಡಿ ನೋಡಿ ಸೋ-**
**ರ್ದುದು ಕೊಳಗೊಂಡ ಗರ್ವರಸಂ- ಆ ಭರತೇಶ್ವರ ಚಕ್ರವರ್ತಿಯಾ !**

ಚಕ್ರವರ್ತಿಯಾಗಿ ವಿಜಯವೈಭವವನ್ನು ಗಳಿಸಿದವನು ತಾನೊಬ್ಬನೇ ಅಲ್ಲ. ಹಿಂದಿನ ಕಲ್ಪಕೋಟಿಗಳಲ್ಲಿ ಚಕ್ರವರ್ತಿಗಳು ತಂಡತಂಡವಾಗಿ ಮೆರೆದು, ತಮ್ಮ ಮಹಿಮೆಗೆ ಸಾಕ್ಷಿಯಾಗಿ ಆ ಬೆಟ್ಟದ ತಪ್ಪಲಲ್ಲೆಲ್ಲಾ ಪ್ರಶಸ್ತಿಗಳನ್ನು ಕೆತ್ತಿಸಿದ್ದಾರೆ. ಇನ್ನೊಬ್ಬನ ಪ್ರಶಸ್ತಿಯನ್ನು ಬರಸುವುದಕ್ಕೆ ಕೂಡ ಎಡೆಯಿಲ್ಲದಂತೆ ಅವು ಕಿಕ್ಕಿರಿದಿವೆ! ಭರತಚಕ್ರವರ್ತಿ ಇದನ್ನು ನೋಡಿ ನೋಡಿ ನೋಡಿದನು: ಅದುವರೆಗೂ ಮಡುಗಟ್ಟಿದ್ದ ಅವನ ಗರ್ವರಸ ಸೋರಿಹೋಯಿತು; ತನ್ನ ಒಣಹೆಮ್ಮೆಗೆ ನಾಚಿಕೆಯುಂಟಾಯಿತು. ಹಿಂದಿನ ದೊರೆಗಳಲ್ಲೊಬ್ಬನ ಪ್ರಶಸ್ತಿಯನ್ನು ಒರಸಿ ಹಾಕಿ ಆ ಜಾಗದಲ್ಲಿ ತನ್ನ ಪ್ರಶಸ್ತಿಯನ್ನು ಬರಸಿ, ಸಂಪ್ರದಾಯವನ್ನು ಪಾಲಿಸಿದನು. ಏನು ವಿಜಯ ಇದು!

ಭರತನು ಊರಿಗೆ ಹಿಂದಿರುಗಿದಾಗ ಇನ್ನೊಂದು ಸಂಗತಿ ನಡೆಯಿತು. ಅದುವರೆಗೂ ತಡೆಯಿಲ್ಲದೆ ನುಗ್ಗುತ್ತಿದ್ದ ಚಕ್ರ

ರತ್ನವು ರಾಜಧಾನಿಯ ಬಾಗಿಲಲ್ಲಿ ನಿಂತುಬಿಟ್ಟಿತು. ಹೊರಗಿನ ರಾಜರೆಲ್ಲರೂ ಭರತಚಕ್ರವರ್ತಿಗೆ ತಲೆಬಾಗಿದ್ದರೂ ಅವನ ತಮ್ಮಂದಿರಾದ ಬಾಹುಬಲಿಯೇ ಮೊದಲಾದವರು ಅವನನ್ನು ಅಧಿರಾಜನೆಂದು ಒಪ್ಪಿಕೊಳ್ಳದಿದ್ದುದರಿಂದ ವಿಜಯಯಾತ್ರೆ ಮುಗಿದಂತಾಗಲಿಲ್ಲ. ಹೀಗೆ, ದೇಶದೇಶಗಳನ್ನು ಗೆದ್ದು ಬಂದವನಿಗೆ ಮನೆವಾರ್ತೆಯೇ ವಿಗಡಿಸಿಕೊಂಡಿತು. ವಿಜಯೋನ್ಮತ್ತನಾದ ಭರತನಿಗೆ ತಮ್ಮಂದಿರನ್ನು ಅಧೀನರನ್ನಾಗಿಸಿದ ಹೊರತು ತೃಪ್ತಿಯಿಲ್ಲ. ಇವನ ಹಠವನ್ನರಿತು, ಬಾಹುಬಲಿಯನ್ನುಳಿದ ಮಿಕ್ಕ ನೂರುಮಂದಿ ಸಹೋದರರು "ನಮ್ಮ ತಂದೆ ಕೊಟ್ಟ ರಾಜ್ಯಕ್ಕೆ ಈಗ ಅಣ್ಣನ ಹಂಗಿಗೇಕೆ ಸಿಕ್ಕಬೇಕು?" ಎಂದು ಆಲೋಚಿಸಿ, ಆ ರಾಜ್ಯವನ್ನೇ ತೊರೆದು, ಮತ್ತೆ ತಂದೆಯ ಬಳಿಗೆ ಹೋಗಿ ಅವನಿಂದ ಶ್ರೇಷ್ಠವಾದ ತಪೋರಾಜ್ಯವನ್ನು ಪಡೆದು ನಿಂತರು. ಇವರ ವರ್ತನೆಯನ್ನು ಕೇಳಿ ಭರತನಿಗೆ ಬೆರಗುಂಟಾಯಿತು; ಆದರೆ ಬುದ್ಧಿ ಬರಲಿಲ್ಲ. ಈಗ ಬಾಹುಬಲಿಯನ್ನು ಕೆಣಕುತ್ತಾನೆ. ಅವನು ಈ ಚಕ್ರವರ್ತಿಯ ಸಾಹಸ ಕಾರ್ಯಗಳನ್ನೆಲ್ಲಾ ಹಾಸ್ಯಮಾಡಿ ನಕ್ಕು,

**ಭರತಂ ಷಟ್ಖಂಡಭೂವಲ್ಲಭನೆನೆ ಸಿರಿಯಂ ಗೆಂಟಱೊಳ್[1] ಕೇಳ್ದು ರಾಗಂ-**
**ಬೆರಸಿರ್ಪ-ಈನಣ್ಪು[2] ಸಾಲ್ಗುಂ. ಕರೆದೊಡೆ ಬೆಸನೇನೆಂಬ ಜೀಯೆಂಬ ದೇವಂ-**
**ಬ-ಅರಸೆಂಬಾಳೆಂಬ ದೈನ್ಯಕ್ಕೆಲವೊ ತನುವನ್-ಆನೊಡ್ಡುವಂತು-ಆದಿದೇವಂ**
**ಪುರುದೇವಂ ದೇವದೇವಂ ಕುಡೆ ಪಡೆದ ನೆಲಕ್ಕಾಕೊಳಂ ಪಂಥಮುಂಟೇ?**

ಎಂದು ಭರತನ ದೂತನಿಗೆ ಹೇಳಿಬಿಡುತ್ತಾನೆ. ಇಬ್ಬರೂ ಶೂರರು, ಛಲಗಾರರು; ಯುದ್ಧವೇ ಒಡ್ಡಿತು. ದೃಷ್ಟಿಯುದ್ಧ ಜಲಯುದ್ಧ ಮಲ್ಲಯುದ್ಧಗಳೆಂಬ ಮೂರರಲ್ಲೂ ಬಾಹುಬಲಿಯೇ

---

[1] ಗೆಂಟಱೊಳ್—ದೂರದಲ್ಲಿ(ಯೇ); [2] ನಣ್ಪು—ನಂಟತನ.

ಗೆಲ್ಲುತ್ತಾನೆ. ಆಗ ಅಣ್ಣನು ಸೋಲಿನಿಂದ ಖತಿಗೊಂಡು, ತಮ್ಮನನ್ನು ಘಾತಿಸುವಂತೆ ತನ್ನ ಚಕ್ರಕ್ಕೆ ಬೆಸಸುತ್ತಾನೆ. ಆದರೆ ಆ ಚಕ್ರವು ವಿಜಯಿಯಾದ ಬಾಹುಬಲಿಗೆ ಪ್ರದಕ್ಷಿಣೆ ಮಾಡಿ ಅವನ ಮಗ್ಗುಲಲ್ಲೇ ನಿಂತುಬಿಡುತ್ತದೆ. ಭರತನ ಮಹಿಮೆಯೆಲ್ಲಿ, ರಾಜ್ಯಲೋಭಕ್ಕಾಗಿ ಅವನು ಈಗ ಮಾಡ ಲೆಳಸಿದ ಅಕಾರ್ಯವೆಲ್ಲಿ! ಇದನ್ನು ನೋಡಿ, ವಿಜಯೋತ್ಸಾಹದ ಸಮಯದಲ್ಲಿ ಬಾಹುಬಲಿಗೆ ವೈರಾಗ್ಯ ಹುಟ್ಟಿಬಿಡುತ್ತದೆ:

ಇನಿಯವು[1] ಮೊದಲೊಳ್, ಸಂಜೆಯ
ಪನಿವೋಲ್ ಬಟ್ಟೆಯ್ದೆ ಮುಳಿದು ಕೋಂದಿಕ್ಕುವುವು; ಇಂ-
ತೆನೆಯೆನೆ ವಿಷಯಸುಖಾಸ್ವಾ-
ದನದೊಳ್ ಲಂಪಟರಿವೇಕೆಯೋ ನರಪಶುಗಳ್ !

"ತಾನು ಆಸೆಪಟ್ಟ ರಾಜ್ಯವನ್ನು ಭರತನೇ ಆಳಿಕೊಳ್ಳಲಿ, ನಾನು ಜೈನದೀಕ್ಷೆಯನ್ನು ಪಡೆಯುತ್ತೇನೆ" ಎಂದು ಬಾಹುಬಲಿ ನಿಶ್ಚಯಿಸಿ, ತನ್ನ ಹೀನಕಾರ್ಯಕ್ಕಾಗಿ ನಾಚಿನಿಂತಿದ್ದ ಅಣ್ಣನನ್ನು ಕುರಿತು,

'ನೆಲಸುಗೆ ನಿನ್ನ ವಕ್ಷದೊಳೆ ನಿಶ್ಚಳಮಿ- ಈ ಭಟಖಡ್ಗಮಂಡಲೋ-
ತ್ಪಲವನವಿಭ್ರಮ ಭ್ರಮರಿಯಪ್ಪ ಮನೋಹರಿ ರಾಜ್ಯಲಕ್ಷ್ಮಿ; ಭೂ-
ವಲಯಮನ್- ಅಯ್ಯನಿತ್ತುದುಮನ್- ಆಂ ನಿನಗಿತ್ತೆನ್..
ಇದೇವುದ[2]ಣ್ಣ! ಸೇ-
ನೊಲಿದ ಲತಾಂಗಿಗಂ ಧರೆಗಂ- ಆಟಿಸಿ[3]ದಂದು ನೆಗಟ್ತ ಮಾಸದೇ!

ಅವಧರಿಸದೆ ನಿನ್ನೊಳ್ ಪಿರಿ-
ದವಿನಯಮಂ ನೆಗಟ್ದ ದೋಷಮಂ ತಪದೊಳ್ ನೀ-
ಗುವೆನ್-. ಅಸದಾಗ್ರಹಮಂ ಬಿಸು-
ಡುವುದು-. ಒರ್ಮೆಗೆ ಮಱುವುದೆನ್ನ ದುರ್ವಿಳಸನ[4]ಮಂ.'

ಎಂದು ಬೇಡಿಕೊಂಡು ಒಪ್ಪಿಸಿ, ತಾನು ಆದಿನಾಥನ ಬಳಿಗೆ

---

[1] ಇನಿಯವು — ಮಧುರವಾದವು; [2] ಇದೇವುದು — ಇವರಿಂದ ಏನು!
[3] ಆಟಿಸು — ಅಪೇಕ್ಷಿಸು. [4] ದುರ್ವಿಳಸನ — ಕೆಟ್ಟ ನಡತೆ.

ಹೋಗಿ, "ಹಿಂದೆ ಲೌಕಿಕ ಯುವರಾಜಪದವಿಯನ್ನು ಕೊಟ್ಟಿದ್ದಿರಿ; ಈಗ ಸಂನ್ಯಾಸದ ಯುವರಾಜಪದವಿಯನ್ನು ದಯಪಾಲಿಸಿ" ಎಂದು ಕೇಳಿಕೊಂಡು ಬಂದು ತಪಸ್ಸಿಗೆ ನಿಲ್ಲುತ್ತಾನೆ. ಇನ್ನು, ಭರತನಿಗೆ ಸೇರಿದ ನೆಲದ ಮೇಲೆ ನಿಂತಿದ್ದೇನಲ್ಲಾ ಎಂಬ ಕ್ಲೇಶ ಅವನನ್ನು ಬಾಧಿಸುತ್ತಿರುತ್ತದೆ. ಇದನ್ನು ತಿಳಿದು ಭರತನೇ ಬಂದು ಈ ಮಾನಶಾಲಿಯ ಚರಣಕ್ಕೆರಗಿ, "ಇದು ನೀನೇ ನನಗೆ ಕೊಟ್ಟ ನೆಲ; ಅನ್ಯರದೆಂದು ಬಗೆಯಬಹುದೆ? 'ನಿನ್ನನೆ ನೀಂ ಬಗೆಯ; ಬಗೆಯದಿರ್ ಪೆಱಪೆಱತಂ'" ಎಂದು ಪ್ರಾರ್ಥಿಸಿ, ಅವನ ತಪಸ್ಸನ್ನು ಹದಗೊಳಿಸುತ್ತಾನೆ.[1]

ವೈರಾಗ್ಯಚಕ್ರವರ್ತಿಯ ವಿಜಯದ ಎದುರಿಗೆ ಲೌಕಿಕ ಚಕ್ರವರ್ತಿಯ ವಿಜಯ ಎಷ್ಟು ಮಂಕಾಗಿ, ಹೀನವಾಗಿ ಕಾಣುತ್ತದೆ! ಭರತನಿಗೆ ತಲೆಬಾಗಲೊಲ್ಲದ ತಮ್ಮಂದಿರೆಲ್ಲರೂ ತೀರ್ಥಂಕರನ ಬಳಿಗೆ ತಾವಾಗಿಯೇ ಹೋಗಿ ಯತಿದೀಕ್ಷೆಯನ್ನು ಪಡೆಯುತ್ತಾರೆ. ಭರತನಿಗಾದರೂ ತನ್ನ ವಿಜಯಗಳಿಂದ ಏನು ಪ್ರಯೋಜನವಾಯಿತು? ತನಗೆ ಸಗ್ಗದವರು ಇನ್ನೂ ಇದ್ದಾರಲ್ಲಾ ಎಂಬ ಹುರುಡು ಹುಟ್ಟಿ ಅವನ ನೆಮ್ಮದಿಯನ್ನು ಉಡುಗಿಸಿತು, ಅಕಾರ್ಯಕ್ಕೆ ಕೂಡ ಕೈಹಾಕಿಸಿತು. ಇದನ್ನೆಲ್ಲಾ ನೋಡಿ ಭರತನು ಕಡೆಗೆ ಬುದ್ಧಿಯನ್ನು ಕಲಿತುಕೊಳ್ಳುತ್ತಾನೆ. ರಾಜ್ಯವನ್ನು ಧರ್ಮದಿಂದ ಆಳಿ, ಕೊನೆಗೆ ತಾನೂ ಯತಿದೀಕ್ಷೆಯನ್ನು ತಾಳುತ್ತಾನೆ. ಆಗ ಮನುಷ್ಯರಿಗೆ ಮಾತ್ರವಲ್ಲ, ದೇವತೆಗಳಿಗೂ ಅವನು ವಂದ್ಯನಾಗುತ್ತಾನೆ.

ಇದುವರೆಗೆ ನೋಡಿದಂತೆ, ಆದಿಪುರಾಣದಲ್ಲಿ ವೈರಾಗ್ಯಪ್ರತಿಪಾದನೆ ರಮ್ಯವಾದ ಎರಡು ಕಥೆಗಳಲ್ಲಿ ಕವಲೊಡೆದಿದೆ.

---

[1] ಈ ಬಾಹುಬಲಿಯ ಪ್ರತಿಮೆಯೇ ಶ್ರವಣಬೆಳ್ಗೊಳದ ಗೊಮ್ಮಟೇಶ್ವರ.

ಕಥಾಂಶಗಳು ಸ್ವಾರಸ್ಯದಿಂದ ಕೂಡಿ, ಧರ್ಮತತ್ತ್ವಗಳು ಸನ್ನಿವೇಶದಿಂದ ಉಕ್ಕಿ ಬಂದಿರುವುದರಿಂದ ಅವು ಮತವಿಚಾರವನ್ನೊಲ್ಲದವರನ್ನೂ ಮೆಚ್ಚಿಸುತ್ತವೆ. ಪಂಪನ ನಿರೂಪಣೆಯ ಒಂದು ವಿಶೇಷಾಂಶವನ್ನು ಇಲ್ಲಿ ಗಮನಿಸಬೇಕು. ಭೋಗಗಳು ಕ್ಷಣಿಕವೆನ್ನುತ್ತಾನೆ; ಅವುಗಳ ಪರಿಣಾಮವು ವಿಷಮವೆನ್ನುತ್ತಾನೆ. ಆದರೆ, ಮಿಕ್ಕ ಕೆಲವರು ಕವಿಗಳೂ ದಾರ್ಶನಿಕರೂ ಮಾಡುವಂತೆ—ಮಾನವದೇಹವೇ ನಿಂದ್ಯವೆಂದು, ಸಂಸಾರದಲ್ಲಿ ಸುಖಲೇಶವೂ ಇಲ್ಲವೆಂದು ಅವನು ಎಲ್ಲೂ ದೂಷಿಸಿಲ್ಲ. ಪಂಪನಿಗೆ ದೇಹಸೌಂದರ್ಯದಲ್ಲಿ ಅಭಿಮಾನವಿತ್ತು; ಸಂಸಾರಸುಖದಲ್ಲಿ ಆಸಕ್ತಿಯಿತ್ತು. ಕ್ಷಣಿಕವಾದರೂ ಧರ್ಮವಿರುದ್ಧವಲ್ಲದ ಸವಿ ಇದರಲ್ಲೆಲ್ಲಾ ಉಂಟೆಂದು ಅವನು ಅನುಭವಿಸಿ ತಿಳಿದಿದ್ದನು.

'ಧರ್ಮಂ ಪ್ರಧಾನಂ, ಅರ್ಥಂ
ಧರ್ಮಾಶ್ರಿತಫಳಂ, ಅದರ್ಕೆ ರಸಮದು ಕಾಮಂ'

ಎಂದು ಅವನು ಸ್ಪಷ್ಟವಾಗಿ ಹೇಳಿದ್ದಾನೆ. ಆದಕಾರಣ, ಈ ಕಾವ್ಯದಲ್ಲಿ ಅವನು ತನ್ನ ಮನಸ್ಸಾಕ್ಷಿಗೆ ವಿರೋಧವಾಗಿ ಎಲ್ಲೂ ಮಾನವದೇಹವು ಕಶ್ಮಲದ ಕೂಪವೆಂದು ಅಲ್ಲಗಳೆದಿಲ್ಲ. ಅದರ ಬದಲು ದೇಹಸೌಂದರ್ಯದ ಆಕರ್ಷಣೆಯನ್ನೂ, ಜೀವನಕ್ಕೆ ಪರಿಮಳವನ್ನು ಕೊಡುವ ಭೋಗಾಂಗಗಳ ಸೊಗಸನ್ನೂ ಅನೇಕ ಸಂದರ್ಭಗಳಲ್ಲಿ ನಿರೂಪಿಸಿದ್ದಾನೆ. ನೀಲಾಂಜನೆಯ ಮನೋಹರ ನಾಟ್ಯದ ವರ್ಣನೆಯನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು. ತನ್ನ ಬಾಳಿನಲ್ಲಿ ಎಲ್ಲ ಬಗೆಯ ಭೋಗಗಳನ್ನೂ ಕೊರತೆಮಾಡಿಕೊಳ್ಳದೆ ಅನುಭವಿಸಿ, ಅವುಗಳ ಸವಿಯನ್ನೂ ಅಸ್ಥಿರತೆಯನ್ನೂ ಒಟ್ಟಿಗೇ ಕಂಡು, ಅವಕ್ಕೆ ಮೀರಿದ ಶಾಶ್ವತಸುಖವನ್ನು ಬಯಸುವ ರಸಿಕಹೃದಯ ಅವನದು.

———

# ೩. ವಿಕ್ರಮಾರ್ಜುನವಿಜಯ

ಭಾರತದ ಕಥೆಯನ್ನು ಅವಲಂಬಿಸಿ ಕನ್ನಡದಲ್ಲಿ ಕಾವ್ಯ ಬರೆಯುವುದು ಪಂಪನಿಗಿಂತ ಹಿಂದೆಯೇ ಮೊದಲಾಗಿದ್ದಂತೆ ತೋರುತ್ತದೆ. 'ಕಾವ್ಯಾವಲೋಕನ'ದಲ್ಲಿ ನಾಗವರ್ಮನು (ಕ್ರಿ.ಶ. ಸುಮಾರು ೧೧೪೫) ಈಗ ನಮಗೆ ದೊರೆಯದ ಹಲವು ಪ್ರಾಚೀನ ಕಾವ್ಯಗಳಿಂದ ಪದ್ಯಗಳನ್ನು ಉದ್ಧರಿಸಿ ಉಳಿಸಿಕೊಟ್ಟಿದ್ದಾನೆ. ಇಲ್ಲಿ ಭಾರತಕ್ಕೆ ಸಂಬಂಧಪಟ್ಟ ಪದ್ಯಗಳೂ ಹೇರಳವಾಗಿ ಬಂದಿವೆ; ಇವುಗಳಲ್ಲಿ ಕೆಲವಾದರೂ ಪಂಪನಿಗಿಂತ ಪ್ರಾಚೀನವೆಂದು ಹೇಳಲು ಅವಕಾಶವುಂಟು. ಇಷ್ಟಾದರೂ, ಭಾರತದ ಒಟ್ಟು ಕಥೆಯನ್ನು ಒಂದು ಆಯಕಟ್ಟಿನಲ್ಲಿ ಹಿಂದೆ ಯಾರೂ ನಿರೂಪಿಸಿರಲಿಲ್ಲ; ಪಂಪನೇ ಇದನ್ನು ಸೂಚಿಸಿದ್ದಾನೆ. 'ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ', ಮುಖ್ಯ ಪ್ರಸಂಗಗಳಲ್ಲಿ ಯಾವುದನ್ನೂ ಕೈಬಿಡದೆ, 'ಸಮಸ್ತಭಾರತ'ವನ್ನು 'ವಿಕ್ರಮಾರ್ಜುನವಿಜಯ'ವಾಗಿ ಕನ್ನಡದಲ್ಲಿ ಮೊದಲು ಹೇಳಿದ ಕವಿ ಪಂಪ; ಅದನ್ನು ಹೇಳಿಸಿದ ದೊರೆ ಅರಿಕೇಸರಿ.

'ಸಮಸ್ತಭಾರತ' ಎಂಬ ಪದದಲ್ಲಿ ಇನ್ನೊಂದು ಅರ್ಥವೂ ಅಡಕವಾಗಿದೆಯೆಂದು ಕೆಲವರು ವಿದ್ವಾಂಸರ ಅಭಿಪ್ರಾಯ. 'ಸಮಾಸ' ಎಂದರೆ ಕೂಡಿಸುವುದು; ಈ ಕಾವ್ಯದಲ್ಲಿ ಭಾರತ ಕಥೆಯ ಜೊತೆಗೆ ತನ್ನ ಪ್ರಭುವಿನ ಚರಿತ್ರೆಯೂ ಕೂಡಿ ಬಂದಿದೆಯೆಂಬುದನ್ನೂ ಪಂಪನು ಈ ಮಾತಿನಿಂದ ಸೂಚಿಸಿರಬಹುದು. ಹೇಗೂ, ಅರಿಕೇಸರಿಯನ್ನು ತನ್ನ ಕೃತಿಗೆ ನಾಯಕನನ್ನಾಗಿ ಮಾಡಿ, 'ಸಂದ- ಅರ್ಜುನನೊಳ್ ಪೋಲ್ವೀ ಕಥಾಭಿತ್ತಿಯನ್- ಅನುನಯದಿಂ ಪೇೞಲೆಂದೆತ್ತಿಕೊಂಡೆಂ' ಎಂದು ಅವನು ಸ್ಪಷ್ಟವಾಗಿ ಹೇಳಿಯೇ ಇದ್ದಾನೆ. ಆದರಂತೆ, ಅರಿಕೇಸರಿಯ ಹೆಸರು ಬಿರುದುಗಳನ್ನು ಅರ್ಜುನನಿಗೂ ಅರ್ಜುನನ

ಸಾಹಸಗಳನ್ನು ಅರಿಕೇಸರಿಗೂ ಸಮಗೊಳಿಸಿ, ಒಬ್ಬನ ಮಾತು ಬಂದಾಗಲೆಲ್ಲ ಇನ್ನೊಬ್ಬನ ನೆನಪು ಬರುವಂತೆ ಮಾಡಿದ್ದಾನೆ.

ಪೌರಾಣಿಕ ವೀರನೊಬ್ಬನೊಂದಿಗೆ ಹೋಲಿಕೆ ಪಡೆಯಲು ಪಂಪನ ನಾಯಕನಿಗೆ ಕೆಲಮಟ್ಟಿನ ಯೋಗ್ಯತೆಯೂ ಇದ್ದಿತು. ಈ ಅರಿಕೇಸರಿಯ ವೃತ್ತಾಂತ ಅವನ ವೇಮುಲವಾಡದ ಶಿಲಾ ಶಾಸನದಿಂದಲೂ (ಕ್ರಿ. ಶ. ಸು. ೯೨೭), ಅವನ ಮೊಮ್ಮಗ ಮೂರನೆಯ ಅರಿಕೇಸರಿಯ ಪರಭಣಿಯ ತಾಮ್ರಶಾಸನದಿಂದಲೂ (ಕ್ರಿ.ಶ. ೯೬೬) ಕೊಂಚಮಟ್ಟಿಗೆ ತಿಳಿಯಬರುತ್ತದೆ; ಪಂಪನ ಹೇಳಿಕೆಗಳು ಈ ವಿಷಯವನ್ನೇ ದೃಢಪಡಿಸುತ್ತವೆ. ರಾಷ್ಟ್ರಕೂಟ ಚಕ್ರವರ್ತಿಗಳಿಗೆ ಅಧೀನವಾಗಿ ಆಳುತ್ತಿದ್ದ ಒಂದು ಚಾಳುಕ್ಯಶಾಖೆಗೆ ಸೇರಿದ 'ಸಾಮಂತಚೂಡಾಮಣಿ' ನಮ್ಮ ಅರಿಕೇಸರಿ. ಸಮ್ರಾಜರಿಗೂ ಸಾಮಂತರಿಗೂ ದೇಹಸಂಬಂಧವೂ ಇದ್ದಿತು. ಮೂರನೆಯ ಇಂದ್ರಚಕ್ರವರ್ತಿಯ (ಕ್ರಿ.ಶ. ೯೧೫) ಮಗಳಾದ ರೇವಕನಿರ್ಮಡಿಯೆಂಬ ಹೆಸರುಳ್ಳ ಲೋಕಾಂಬಿಕೆಯನ್ನು ಅರಿಕೇಸರಿ ಮದುವೆಯಾಗಿದ್ದನು. ಅವನು 'ಇಂದ್ರೇಂದ್ರನ (=ಇಂದ್ರರಾಜನ) ತೋಳ್ ತೊಟ್ಟಿಲಾಗಿರೆ ಬಳೆದಂ' ಎಂಬ ಪಂಪನ ಹೇಳಿಕೆಯನ್ನು ನೋಡಿದರೆ ಅರಿಕೇಸರಿಯ ತಾಯಿಯ ತವರುಮನೆಯೂ ರಾಷ್ಟ್ರಕೂಟವಂಶವೇ ಆಗಿರಬೇಕೆಂದು ತೋರುತ್ತದೆ. ಈ ನಮ್ಮ ನಾಯಕನು ಚಿಕ್ಕಂದಿನಿಂದಲೂ 'ಪರಬಲದ ನೆತ್ತರ ಕಡಲೊಳಗಣ ಜಿಗುಳೆ ಬಳೆವ ತೆಱದೊಳೆ ಬಳೆದಂ.' ಮುಂದೆ, ಇಂದ್ರಚಕ್ರವರ್ತಿಯ ಮಗನಾದ ನಾಲ್ಕನೆಯ ಗೋವಿಂದನೊಡನೆ ಹೋರಾಡಿ, ಅವನ ಹೆದರಿಕೆಯಿಂದ ತನಗೆ ಶರಣಾಗಿ ಬಂದಿದ್ದ ಬಿಜ್ಜನೆಂಬವನನ್ನು ರಕ್ಷಿಸಿದ್ದಲ್ಲದೆ, ಗೋವಿಂದನ ಆಧಿಪತ್ಯವನ್ನೇ ತಪ್ಪಿಸಿ ಇಂದ್ರನ ತಮ್ಮನಾದ ಬದ್ದೆಗನೆಂಬಾತನಿಗೆ ರಾಷ್ಟ್ರಕೂಟಸಾಮ್ರಾಜ್ಯವನ್ನು ಕೈಗೂಡಿಸಿ

ಕೊಟ್ಟ ಸಾಹಸವೂ ಅರಿಕೇಸರಿಯದು. ಇನ್ನು, ರಾಷ್ಟ್ರಕೂಟರು ಯದುವಂಶೀಯರೆಂಬುದನ್ನು ಜ್ಞಾಪಿಸಿಕೊಂಡರೆ, ಅರ್ಜುನನ ಕಥೆಗೂ ಅರಿಕೇಸರಿಯ ಕಥೆಗೂ ಹೋಲಿಕೆ ವ್ಯಕ್ತವಾಗುತ್ತದೆ. ಸುಭದ್ರೆ, ಲೋಕಾಂಬಿಕೆ—ಈ ಇಬ್ಬರೂ ಯದುವಂಶದ ಕನ್ಯೆಯರು. ಅರ್ಜುನನಂತೆ ಅರಿಕೇಸರಿಯೂ ತನ್ನ ನಲ್ಲೆಯನ್ನು ಅವಳ ಬಂಧುಗಳ ಇಷ್ಟಕ್ಕೆ ವಿರೋಧವಾಗಿ ಹರಣಮಾಡಿಕೊಂಡು ಬಂದು ' ಪ್ರಿಯಗಳ್ಳ ' ನೆಂಬ ಬಿರುದನ್ನು ಸಂಪಾದಿಸಿದನೇನೋ. ಅವನಿಗೂ ಲೋಕಾಂಬಿಕೆಯ ಅಣ್ಣನಾದ ಗೋವಿಂದನಿಗೂ ಇದ್ದ ವೈರದಲ್ಲಿ ಅರ್ಜುನ-ಬಲರಾಮರ ವೈಮನಸ್ಯದ ಛಾಯೆ ಇದ್ದರೂ ಇರಬಹುದು.

ಮೇಲೆ ಗುರುತು ಕಾಣಿಸಿರುವ ಐತಿಹಾಸಿಕಾಂಶಗಳು ವಿಕ್ರಮಾರ್ಜುನವಿಜಯದ ಸಮಸ್ಯೆಯೊಂದನ್ನು ಬಿಡಿಸುತ್ತವೆ. ತುಂಬಿದ ಕುರುಸಭೆಯಲ್ಲಿ ದ್ರೌಪದಿಯ ಮುಡಿಯನ್ನು ದುಶ್ಶಾಸನನು ಹಿಡಿದು ಎಳೆದಾಡಿದ್ದೇ ಭಾರತಯುದ್ಧಕ್ಕೆ ಬೀಜವಷ್ಟೆ. ತಮ್ಮ ಅಂತಃಪುರದ ಹೆಣ್ಣಿಗೆ ಒದಗಿದ ಈ ಘೋರಾಪಮಾನದ ಕಳಂಕವನ್ನು ಪಾಂಡವರು ಶತ್ರುರಕ್ತದಿಂದಲೇ ತೊಳೆಯಬೇಕಾಯಿತು. ದುಶ್ಶಾಸನನನ್ನು ಕೊಂದ ಕೈಯಿಂದ ದ್ರೌಪದಿಯ ಮುಡಿಯನ್ನು ಭೀಮನು ಕಟ್ಟಿದಮೇಲೆ ಈ ಮಾತನ್ನು ಆಡುತ್ತಾನೆ :

ಇದರಿಂ ಶ್ವೇತಾತಪತ್ರ ಸ್ಥಗಿತ ದಶದಿಶಾಮಂಡಲಂ ರಾಜಚಕ್ರಂ
ಪುದಿದಟ್ಟಾಡಿತ್ತು-[1] ಅಡಂಗಿತ್ತಿದರಿಂದೊಳೆ ಕುರುರಾಜಾನ್ವಯಂ; ಮತ್ತಮಾಪ-
ಕ್ಕಿದರಿಂದಂ ನೋಡ- ಅಗುರ್ವು[2] ವಿಪುದು ; ಇದುವೆ ಮಹಾ-
ಭಾರತಕ್ಕಾದಿಯಾಯ್ತು. ಅ-
ಜ್ಜದಳಾಕ್ಷೀ ಪೇಳು, ಸಾಮಾನ್ಯಮೆ ಬಗೆಯೆ ಭವತ್ಕೇಶಪಾಶಪ್ರಪಂಚಂ !

---

[1] ಅಟ್ಟಾಡಿತ್ತು—ನಿಶ್ಶೇಷವಾಯಿತು ; [2] ಅಗುರ್ವು—ಭಯಂಕರತೆ.

ದ್ರೌಪದಿಯ ಕೇಶಪಾಶವು ಕುರುಕುಲಕ್ಕೆ ಮಾತ್ರವಲ್ಲ, ಸಮಸ್ತ ರಾಜಕುಲಕ್ಕೇ ಯಮಪಾಶವಾಯಿತು; ಅದನ್ನು ದುಶ್ಯಾಸನನು ಮುಟ್ಟಿದ್ದೇ ಮಹಾಭಾರತಕ್ಕೆ ಆದಿಯಾಯಿತು! ಈ ವಿಷಯ ಪಂಪನಿಗೆ ಚೆನ್ನಾಗಿ ಗೊತ್ತು. ಆದರೆ ಅವನ ಕಾವ್ಯದಲ್ಲಿ, ವಿಜಯ ಶಾಲಿಯಾದ ಅರ್ಜುನನೊಂದಿಗೆ ತುಲಾಭಾರ ತೂಗಿಸಿಕೊಂಡು ಪಟ್ಟಕಟ್ಟಿಸಿಕೊಳ್ಳುವ ಮಹಿಷಿ ಯಾರು?—ಭಾರತದ ಚಾಲಕ ಶಕ್ತಿಯಾದ ದ್ರೌಪದಿಯಲ್ಲ, ತವರುಮನೆಯಲ್ಲಿ ತೆಪ್ಪಗೆ ಕುಳಿತಿದ್ದ ಸುಭದ್ರೆ! ಇಷ್ಟೇ ಅಲ್ಲ. ಅರ್ಜುನ-ಸುಭದ್ರೆಯರ ಪ್ರಣಯ ಕಥೆಗೆ ಪಂಪನು ಹೆಚ್ಚಿನ ಪ್ರಾಮುಖ್ಯವನ್ನು ಕೊಟ್ಟು ಎಲ್ಲೆ ಮೀರಿ ಬೆಳಸಿದ್ದಾನೆ. 'ಕತೆಯ ಮೆಯ್ಗಿಡಲೀಯದೆ' ಬರೆಯುವುದರಲ್ಲಿ ನಿಪುಣನಾದ ಕವಿ ಇಲ್ಲೇಕೆ ಹೀಗೆ ಮಾಡಿದನು? ತನ್ನ ಪ್ರಭುವಿನ ಪಟ್ಟಮಹಿಷಿಯಾದ ಲೋಕಾಂಬಿಕೆಯ ಸಂತೋಷಕ್ಕಾಗಿ ಯದುಕುಲದ ಸುಭದ್ರೆಗೆ ಕಥಾದೃಷ್ಟಿಯಿಂದ ಎಷ್ಟುಮಾತ್ರಕ್ಕೂ ಸಲ್ಲದ ಈ ವಿಭವ ಗೌರವಗಳನ್ನು ಅವನು ಸಲ್ಲಿಸಿರಬಹುದೆ?

ದ್ರೌಪದಿಯ ವಿಷಯದಲ್ಲಿ ಪಂಪನು ಮಾಡಿರುವ ಇನ್ನೊಂದು ಮಾರ್ಪಾಡನ್ನು ಕುರಿತು ಎರಡು ಮಾತನ್ನು ಹೇಳಬೇಕಾಗಿದೆ. "ಪಾಂಚಾಲಿ ಪಂಚವಲ್ಲಭೆ" ಯೆಂಬ ದೂರು ತಟ್ಟದಂತೆ ಅವಳನ್ನು ಅರ್ಜುನನೊಬ್ಬನಿಗೇ ಮದುವೆಮಾಡಿಸಿದ್ದಾನೆ. ಆದರೆ ಕೊನೆಯ ತನಕ ಇದನ್ನೇ ನಿರ್ವಹಿಸಲು ಪಂಪನ ಪ್ರತಿಭೆಗೂ ಸಾಧ್ಯವಾಗಲಿಲ್ಲ. ವಿಕ್ರಮಾರ್ಜುನವಿಜಯದಲ್ಲಿ, ಸುಭದ್ರೆಯನ್ನು ವರಿಸಿದ ಬಳಿಕ ಅರ್ಜುನನಿಗೆ ದ್ರೌಪದಿಯ ಅಭಿಮಾನ ಕಡಮೆಯಾಯಿತೋ ಏನೋ; ಇನ್ನು ಭೀಮನು ಮುಂದೆ ಬರುತ್ತಾನೆ. ವ್ಯಾಸಭಾರತದಂತೆ ಇಲ್ಲಿಯೂ ದುಶ್ಯಾಸನ ವಧೆಯ ಭೀಷಣಪ್ರತಿಜ್ಞೆಯನ್ನು ಮಾಡುವವನು ಭೀಮ;

ಕೀಚಕನ ಬಾಧೆಯನ್ನು ಪರಿಹರಿಸಿಕೊಳ್ಳಲು ದ್ರೌಪದಿ ಕಟ್ಟೇಕಾಂತದಲ್ಲಿ ಹೋಗುವುದು ಭೀಮನಲ್ಲಿಗೆ; ವೇಣೀಬಂಧನದ ಪ್ರಸಂಗದಲ್ಲಂತೂ, ದ್ರೌಪದಿ ತನಗೆ ನಾದಿನಿಯೆಂಬುದನ್ನೇ ಭೀಮನು ಮರೆತು ಅವಳನ್ನು 'ತನ್ನ ತಳೋದರಿ' ಯಂತೆ ನಡಸಿಕೊಳ್ಳುತ್ತಾನೆ! ಇಲ್ಲಿ ಪಂಪನಿಗೇನೋ ಮರವಿನ ದೋಷ ತಟ್ಟಿತು; ಆದರೆ ಕಥೆ ಬದುಕಿತು.

ದ್ರೌಪದಿ ಅರ್ಜುನನೊಬ್ಬನಿಗೇ ಮಡದಿಯಾಗಿದ್ದಳೆಂಬ ಸಂಗತಿ ಜೈನಭಾರತದಲ್ಲಿ ಸ್ಪಷ್ಟವಾಗಿ ಬರುತ್ತದೆ; ಪಂಪನ ಮಾರ್ಪಾಡಿಗೆ ಮುಖ್ಯವಾದ ಪ್ರೇರಣೆ ಇಲ್ಲಿಂದಲೇ ಒದಗಿರಬೇಕು. ಇದೊಂದು ಅಂಶವನ್ನು ಬಿಟ್ಟರೆ, ಪಂಪನ ಗ್ರಂಥದಲ್ಲಿ ಬೇರೆಲ್ಲಿಯೂ ಜೈನಕಥೆಯ ಪ್ರಭಾವ ಕಾಣಬರುವುದಿಲ್ಲ. ವ್ಯಾಸಭಾರತದ ಸ್ವಾರಸ್ಯಕ್ಕೆ ಅವನು ಮನಸೋತಿದ್ದನು; ವೈದಿಕ ಮತದವನಾದ ಅರಿಕೇಸರಿಯನ್ನು ತನ್ನ ಕಾವ್ಯನಾಯಕನನ್ನಾಗಿ ಮಾಡಿಕೊಂಡಿದ್ದನು. ಆದ್ದರಿಂದ ಪಂಪನ ಜೈನಶ್ರದ್ಧೆ ಎಲ್ಲಿಯೂ ಕಥೆಗೆ ಅಡ್ಡಿಯಾಗಿ ತಲೆಹಾಕಿಲ್ಲ. ವಿಕ್ರಮಾರ್ಜುನವಿಜಯದಲ್ಲಿ ಕಣ್ಣಿಟ್ಟು ಹುಡುಕಿನೋಡಿದರೆ ಅಲ್ಲೊಂದು ಇಲ್ಲೊಂದು ಜೈನವಾಸನೆಯುಳ್ಳ ಮಾತೂ ಮಾರ್ಪಾಡೂ ಸಿಕ್ಕಬಹುದು; ಶ್ರೀಕೃಷ್ಣನ ಮಹಿಮೆಯನ್ನು ಪಂಪನು ತುಂಬುಕಂಠದಿಂದ ಘೋಷಿಸದೆ ಇರುವುದಕ್ಕೆ ಅವನ ಜೈನದೃಷ್ಟಿ ಕಾರಣವಾಗಿರಬಹುದು; ಅಷ್ಟೇ. ಸಂಶೋಧನೆಗೆಂದು ಹೊರಟಲ್ಲದೆ, ಯಾವ ಸಾಮಾನ್ಯ ವಾಚಕನಿಗೂ ಇಲ್ಲಿಯ ಕಥಾನಿರೂಪಣೆಯಿಂದ ಪಂಪನು ಜೈನನೆಂಬುದು ಗೊತ್ತಾಗಲಾರದು.

ಮಹಾಭಾರತವು ಲಕ್ಷ ಶ್ಲೋಕಗಳಿಂದ ಕಿಕ್ಕಿರಿಯುವ ಮಹಾಗ್ರಂಥ. ಇದರಲ್ಲಿ ನಡುನಡುವೆ ತುಂಬಿಕೊಂಡಿರುವ ಉಪಾಖ್ಯಾನಗಳನ್ನೂ ನೀತಿವಿಸ್ತಾರವನ್ನೂ ಕೈಬಿಟ್ಟರೂ,

ಪಾಂಡವರಾಜ್ಯಾಭಿಷೇಕಕ್ಕೇ ಕಥೆಯನ್ನು ಮುಕ್ತಾಯಗೊಳಿಸಿದರೂ,—ಆಗ ಕೂಡ ಅದು ದೀರ್ಘವಾಗಿಯೇ ನಿಲ್ಲುತ್ತದೆ. ಪಂಪನು ಇದನ್ನು ಸಂಗ್ರಹವಾಗಿ—ತುಂಬ ಸಂಗ್ರಹವಾಗಿ—ಹೇಳಬೇಕಾಯಿತು. ಮೂಲದಲ್ಲಿ ಅಧ್ಯಾಯಗಟ್ಟಳೆಯ ವಿಸ್ತಾರವನ್ನುಳ್ಳ ಕಥಾಭಾಗವನ್ನು ಇಲ್ಲಿ ನಾಲ್ಕು ಪದ್ಯ ಎರಡು ವಚನಖಂಡದಲ್ಲಿ ಸವಿಗೆಡದಂತೆ ಸಂಕ್ಷೇಪಿಸಬೇಕಾದರೆ ಅವನಿಗೆ ಬಲುಜಾಣ್ಮೆ ಬೇಕಾಯಿತು. ಈ ಪರೀಕ್ಷೆಗೆ ಅವನು ಸಜ್ಜಾಗಿಯೂ ಇದ್ದನು; ಪೂರ್ವಪುರಾಣವನ್ನು ಸಂಗ್ರಹಮಾಡಿ ಕೈ ಪಳಗಿಸಿಕೊಂಡಿದ್ದನು. ಕೆಲಸ ಅಲ್ಲಿಗಿಂತ ಇಲ್ಲಿ ಕಠಿನವಾದರೂ, ಅಲ್ಲಿಲ್ಲದ ಒಂದು ದೊಡ್ಡ ಅನುಕೂಲ ಇಲ್ಲಿ ಪಂಪನಿಗಿತ್ತು. ಜೈನನಾದ ಅವನ ದೃಷ್ಟಿಯಲ್ಲಿ ಭಾರತ ಒಂದು 'ಲೌಕಿಕ'ಕಥೆ; ಇದರ ಸಂದರ್ಭಗಳನ್ನು ತನ್ನ ಉದ್ದೇಶಕ್ಕೂ ಅಭಿರುಚಿಗೂ ಸರಿಹೋಗುವಂತೆ ತಿದ್ದಲು ಅವನಿಗೆ ಯಾವ ಅಡ್ಡಿಯೂ ಇರಲಿಲ್ಲ. ಇದರ ಮೇಲೆ 'ಕಿರಾತಾರ್ಜುನೀಯ', 'ವೇಣೀಸಂಹಾರ' ಮೊದಲಾದ ಸಂಸ್ಕೃತ ಕಾವ್ಯ ನಾಟಕಗಳಲ್ಲಿ ವೈದಿಕಮತದ ಕವಿಗಳೇ ಭಾರತಕಥೆಯನ್ನು ತಮಗೆ ಇಷ್ಟಬಂದಂತೆ ಮಾರ್ಪಡಿಸಿಕೊಂಡು, ಸ್ವಾತಂತ್ರ್ಯದ ಹೆದ್ದಾರಿಯನ್ನು ತೆರೆದಿದ್ದರು. ಈ ಹಿಂದಿನ ಕವಿಗಳಿಂದೆಲ್ಲ ಪಂಪನು ಸೂಚನೆಗಳನ್ನು ಬೇಕಾದಷ್ಟು ಸ್ವೀಕರಿಸಿದ್ದಾನೆ; ಆ ಕಾಲದಲ್ಲಿ ಪ್ರಚಾರದಲ್ಲಿದ್ದು ಈಗ ನಮಗೆ ದೊರೆಯದಿರುವ ಭಾರತದ ಭಿನ್ನಪಾಠಗಳಿಂದಲೂ ಬಹುಶಃ ಪ್ರೇರಣೆಯನ್ನು ಪಡೆದಿದ್ದಾನೆ; ಜೈನಭಾರತವನ್ನು ನೋಡಿದ್ದಾನೆ. ಇಷ್ಟೆಲ್ಲಾ ಆದಮೇಲೆ, ತನ್ನ ಪ್ರತಿಭೆ ನಡಸಿದ ಕ್ರಮದಲ್ಲಿ ಅಳುಕಿಲ್ಲದೆ ಮುಂದುವರಿದಿದ್ದಾನೆ.

ವಿಕ್ರಮಾರ್ಜುನವಿಜಯವು ಕನ್ನಡದ ಕನ್ನಡಿಯಲ್ಲಿ ಚಿಕ್ಕದಾಗಿ ಬಿದ್ದ ವ್ಯಾಸಭಾರತದ ನೆರಳಲ್ಲ; ಅಲ್ಲಿಯ ಚಿನ್ನವನ್ನು

ಶೋಧಿಸಿ ತಂದು ಹೊಸದಾಗಿ ಎರಕಹೊಯ್ದು ಒಪ್ಪವಿಟ್ಟು ನಿಲ್ಲಿಸಿದ ನೂತನ ಪುತ್ತಳಿ ಅದು. ಅದರ ನಿರ್ಮಾಣದಲ್ಲಿ ಪಂಪನು ಪಾತ್ರಗಳನ್ನು ತಿದ್ದಿದ್ದಾನೆ, ಸನ್ನಿವೇಶಗಳನ್ನು ನಯಗೊಳಿಸಿದ್ದಾನೆ, ಕಠೋರವೆಂದು ತೋರಿದ ಕೆಲವು ಸಂಗತಿಗಳನ್ನು ಬೇಕೆಂದು ಕೈಬಿಟ್ಟಿದ್ದಾನೆ. ಅಲ್ಲಲ್ಲೇ ಹೊಸ ಸೊಗಸನ್ನು ಎರಡೇ ಮಾತಿನಲ್ಲಿ ಮೂಡಿಸಿದ್ದಾನೆ. ಪಂಪನು ಎಷ್ಟು ಸಂತತವಾಗಿ ಸದ್ದಿಲ್ಲದೆ ಈ ತಿದ್ದುಪಡಿಗಳನ್ನು ಮಾಡುತ್ತಾ ಹೋಗಿರುವನೆಂದರೆ, ಅವನ ಕಾವ್ಯವನ್ನು ವ್ಯಾಸಭಾರತದೊಂದಿಗೆ ಉದ್ದಕ್ಕೂ ಹೋಲಿಸಿನೋಡಿದ ಹೊರತು ಅವನ ಸ್ವತಂತ್ರ ಕಲ್ಪನೆಯ ಪರಿಮಾಣ ನಮಗೆ ಗೊತ್ತಾಗುವುದಿಲ್ಲ. ಹಾಗೆ ಹೋಲಿಸಿ ನೋಡಿದಾಗ, ಮೂಲದ ಈ ಸೊಗಸು ಮರೆಯಾಗಿದೆ, ಈ ಚಿತ್ರ ಮಸಕಾಗಿದೆ, ಇಲ್ಲಿ ತಿದ್ದುವಾಗ ಪಂಪನು ಎಡವಿದ್ದಾನೆ, ಇಲ್ಲಿ ತಪ್ಪುದಾರಿಗೆ ತಿರುಗಿದ್ದಾನೆ—ಎಂಬ ಆಕ್ಷೇಪಣೆ ಒಂದೊಂದು ಕಡೆ ಏಳಬಹುದು. ಸ್ವಾತಂತ್ರ್ಯ ವಹಿಸಿ ಬರೆವದ್ದಕ್ಕೆ ಪಂಪನು ತೆರಬೇಕಾದ ದಂಡ ಅದು. ಹೀಗೆ ದೋಷಗಳನ್ನು ಬೆದಕುವಾಗ, ಅವನು ಸೃಷ್ಟಿಸಿರುವ ಹೊಸ ಸೌಂದರ್ಯವನ್ನು ಮರೆಯದಿದ್ದರೆ ಸಾಕು; ಅದರ ಸವಿಯಲ್ಲಿ ಟೀಕೆಗಳೆಲ್ಲ ಅಡಗಿಹೋಗುತ್ತವೆ.

ಪಂಪನು ಕಲ್ಪಿಸಿರುವ ವ್ಯತ್ಯಾಸಗಳನ್ನೆಲ್ಲಾ ಸೂಕ್ಷ್ಮವಾಗಿ ವಿಮರ್ಶೆಮಾಡುವುದು ನಮ್ಮ ಪುಸ್ತಕದ ಗುರಿಗೆ ನಿಲುಕದ ವಿಷಯ. ಎದ್ದು ಕಾಣುವ ಒಂದೆರಡರ ಕಡೆಗೆ ಬೆರಳು ನೀಡಿ ಮಾತ್ರ ತೋರಿಸಬಹುದು. ಭಾರತ ಯುದ್ಧಕ್ಕೆ ದಾರಿಮಾಡಿ ಕೊಟ್ಟ ದ್ಯೂತದ ಪ್ರಾರಂಭವನ್ನು ನೋಡಿ: ಕಪಟವರಿಯದ ಧರ್ಮಪುತ್ರನನ್ನು ಸಿಕ್ಕಿಸಿಕೊಳ್ಳಲು ಶಕುನಿದುರ್ಯೋಧನರು ಇದೇ ರೀತಿಯಾಗಿ ಬಲೆಯನ್ನು ಹರಡಿ ಅವನಿಗೆ ಜೂಜಿನ ಹುಚ್ಚು ನೆತ್ತಿಗೇರುವಂತೆ ಮಾಡಿದರೇನೋ, ವ್ಯಾಸಮುನಿಗಳಿಗಿಂತಲೂ

ಆಸ್ಥಾನಕವಿಯಾದ ಪಂಪನಿಗೆ ಈ ಮೋಸದ ಜೂಜಿನ ರೀತಿ ಹೆಚ್ಚು ಅನುಭವವಾಗಿದ್ದಿತೇನೋ ಎನ್ನಿಸುತ್ತದೆ.—ಶಲ್ಯನು ಮಡಿದ ಬಳಿಕ ದುರ್ಯೋಧನನ ಚರ್ಯೆಯನ್ನು ನೋಡಿ: ವ್ಯಾಸ ಭಾರತದಲ್ಲಿ, ಅವನು ಶತ್ರುಗಳನ್ನು ಎದುರಿಸಲಾರದೆ ಒಂದು ದಿನದ ಮಟ್ಟಿಗಾದರೂ ಜೀವಗಳ್ಳನಂತೆ ಅಡಗಿಕೊಳ್ಳಲು ಯತ್ನಿ ಸುತ್ತಾನೆ. ಇಲ್ಲಾದರೆ, 'ಅಭಿಮಾನಧನ' ನಾಗಿ, ಸ್ವಜನ ವತ್ಸಲನಾಗಿ, ಆಡಿದ ಮಾತನ್ನೂ ಹೂಡಿದ ಹಠವನ್ನೂ ಪ್ರಾಣ ವಿಡುವವರೆಗೂ ಸಾಧಿಸುವ ಛಲಗಾರನಾಗಿ, ಕಾಣಿಸಿಕೊಳ್ಳು ತ್ತಾನೆ. ತನ್ನ ಆಯುಷ್ಯದ ಕೊನೆಯ ದಿನ ದುರ್ಯೋಧನನು ಹೀಗೆ ಬೆಳಗುವುದಕ್ಕೆ ಅವನು ಪಂಪನ ಪ್ರತಿಭೆಯ ತೀರ್ಥದಲ್ಲಿ ಮಿಂದು ನಿಂತಿರುವುದೇ ಕಾರಣ.—ಇನ್ನು ಹಿಡಿಂಬೆಯ ಸರಳ ಸ್ವಭಾವವು ಭೀಮನೊಂದಿಗೆ ಅವಳು ಆಡಿದ ಎರಡು ಮಾತು ಗಳಲ್ಲಿ ರೂಪುಗೊಳ್ಳುವುದು; ಖಾಂಡವವನವು ಅಗ್ನಿಗೆ ಆಹಾರ ವಾದಾಗ ನಡೆದ ಕರುಣಾರ್ದ್ರವಾದ ಸಂಗತಿಗಳು ಒಂದೆರಡು ಪದ್ಯಗಳಲ್ಲೇ ಕಣ್ಣಿಗೆ ಕಟ್ಟುವುದು;—ಹೀಗೆ ಪಟ್ಟಿಯನ್ನು ಬೆಳಸುತ್ತಾ ಹೋಗಬಹುದು.

ಇವೆಲ್ಲಕ್ಕೂ ಮಿಗಿಲಾಗಿ, ಪಂಪನ ಒಟ್ಟು ಕಾವ್ಯವನ್ನೇ ವ್ಯಾಸಭಾರತದಿಂದ ಬೇರ್ಪಡಿಸಿರುವ ಒಂದು ವ್ಯತ್ಯಾಸವನ್ನು ಸ್ವಲ್ಪ ವಿವರವಾಗಿ ಗಮನಿಸಬೇಕಾಗಿದೆ: ಅದು ಗ್ರಂಥರಚನೆ ಯಲ್ಲಿ ಪಂಪನಿಗಿದ್ದ ಗುರಿ. 'ಪಂಪಭಾರತ' ಎನ್ನುವುದು ವಾಚಕರು ತಮ್ಮ ಸೌಕರ್ಯಕ್ಕಾಗಿ ಕೊಟ್ಟಿರುವ ಹೆಸರು; ಪಂಪನೇ ಇಟ್ಟದ್ದು—'ವಿಕ್ರಮಾರ್ಜುನವಿಜಯ.' ಪಂಪನ ದೃಷ್ಟಿ ಯನ್ನು ಈ ಹೆಸರೇ ಸೂಚಿಸುತ್ತದೆ. ಮಹಾಭಾರತವು ಒಂದು "ಮನೆತನದ ಇತಿಹಾಸ"ವಾದರೆ, ಅದರಲ್ಲಿ ಹಲವು ಮಂದಿ ಮಹಾವೀರರ ಜೀವನ ವೃತ್ತಾಂತಗಳು ಹೆಣೆದುಕೊಂಡಿದ್ದರೆ,

'ವಿಕ್ರಮಾರ್ಜುನವಿಜಯ'ದಲ್ಲಿ ನಾಯಕಪಟ್ಟ ದೊರೆತಿರುವುದು ಆ ವೀರರಲ್ಲಿ ಒಬ್ಬನಿಗೆ ಮಾತ್ರ. ಕೌರವಪಾಂಡವರ ವೈರದ ಕಥೆಯನ್ನು ಜ್ಞಾಪಿಸಿಕೊಂಡರೆ ಸಮಸ್ತ ಭಾರತಕ್ಕೆ ನಾಯಕ ನಾಗುವ ಅರ್ಹತೆ ಅರ್ಜುನನಿಗಿಂತ ದ್ರೌಪದಿಯ ಮನಃಪ್ರಿಯ ನಾದ ಭೀಮನಿಗೆ ಹೆಚ್ಚಾಗಿದೆಯೆಂದು ಕೆಲವರಿಗೆ ತೋರ ಬಹುದು. ಆದರೆ, ತನ್ನ ಪ್ರಭುವಾದ ಅರಿಕೇಸರಿಯೊಂದಿಗೆ ಸರಿದೂಗುವುದಕ್ಕೆ ಒರಟು ನಡತೆಯ ಭೀಮನಿಗಿಂತಲೂ ನಯ ವಿನಯ ವಿಕ್ರಮಗಳ ಮೂರ್ತಿಯಾದ ಅರ್ಜುನನೇ ಉತ್ತಮ ವೆಂದು ಪಂಪನು ಭಾವಿಸಿರಬೇಕು. ಇಷ್ಟರಮೇಲೆ, ಅರ್ಜುನನ ಮಹಿಮೆಯ ಬೇರು ಮಹಾಭಾರತದಲ್ಲೇ ಉಂಟು. ಧರ್ಮ ಪುತ್ರ ಭೀಮಸೇನರಿಬ್ಬರೂ ಹುಟ್ಟಿದ್ದರೂ ಪಾಂಡು ಕುಂತಿಗಳು ತೃಪ್ತಿಹೊಂದದೆ, 'ಲೋಕಜ್ಯೇಷ್ಠ'ನಾದ ಮಗನನ್ನು ಪಡೆಯ ಬೇಕೆಂಬ ಹೆಬ್ಬಯಕೆಯಿಂದ ವ್ರತ ಹಿಡಿದು ಅರ್ಜುನನನ್ನು ಪಡೆ ಯುತ್ತಾರೆ. ಅವನು ಹುಟ್ಟಿದಾಗ ಸ್ವರ್ಗದ ಸಮಸ್ತ ದೇವತೆ ಗಳೂ ಇಳಿದು ಬಂದು ಗೌರವಿಸುವರು; ಈ ಮಹಿಮೆ ಪಾಂಡು ಪುತ್ರರಲ್ಲಿ ಇನ್ನು ಯಾರಿಗೂ ಒದಗಲಿಲ್ಲ. ಇಷ್ಟಕ್ಕೂ ದೇವೇಂ ದ್ರನ ಅನುಗ್ರಹದಿಂದಲ್ಲವೆ ಅರ್ಜುನನು ಹುಟ್ಟಿದ್ದು! ಹೀಗೆ ಜನನಕಾಲದಲ್ಲಿ ದೇವತೆಗಳಿಂದ ಪುರಸ್ಕಾರಹೊಂದಿದ ಈ ಶಿಶು ಮುಂದೆ ದೇವತೆಗಳಿಗೇ ಅಜೇಯನಾಗುತ್ತಾನೆ. ಖಾಂಡವದಹನದ ಸಂದರ್ಭದಲ್ಲಿ ಇವನನ್ನು ಬೇಡಿದ ಯಾಚ ಕನು ಅಗ್ನಿ, ಇವನಿಗೆ ಸೋತ ಎದುರಾಳಿ ಇಂದ್ರ. ಇಂದ್ರಕೀಲದ ಪ್ರಸಂಗದಲ್ಲಿ ಇವನು ಕಿರಾತವೇಷದ ಹರನೊಂದಿಗೇ ಸೆಣಸಿ ಅವನನ್ನು ನೆಲಕ್ಕೆ ಮೆಟ್ಟುತ್ತಾನೆ; ಈ ವಿಜಯಕ್ಕೆ ಬಹು ಮಾನವಾಗಿ ಪಾಶುಪತಾಸ್ತ್ರವನ್ನು ಪಡೆಯುತ್ತಾನೆ. ಮುಂದೆ ಭಾರತಯುದ್ಧದಲ್ಲಿ ಇವನ ರಥವನ್ನು ನಡಸುವವನು ಸಾಕ್ಷಾತ್

ಶ್ರೀಕೃಷ್ಣ. ಕರ್ಣನೊಂದಿಗೆ ನಡೆದ ಸಮರದಲ್ಲಿ ಬ್ರಹ್ಮ ರುದ್ರರು ಮೊದಲುಗೊಂಡು ಎಲ್ಲ ದೇವತೆಗಳೂ ಆಕಾಶದಲ್ಲಿ ನಿಂತು ಅರ್ಜುನನ ವಿಜಯವನ್ನೇ ನಿರೀಕ್ಷಿಸುತ್ತಾರೆ. ಹೀಗೆ ಮಹಾಭಾರತದಲ್ಲಿಯೇ ದೇವತೆಗಳ ಮೆಚ್ಚಿಕೆಯ ವೀರ ಅರ್ಜುನ. ತನ್ನ ಪರಾಕ್ರಮದ ಜೊತೆಗೆ ಅವರ ಬೆಂಬಲವೂ ಇದ್ದಮೇಲೆ ಇವನಿಗೆ ಯಾವುದು ತಾನೇ ಅಸಾಧ್ಯ !

ಈ ಅಂಶಗಳನ್ನೆಲ್ಲಾ ಪಂಪನು ತನ್ನ ಕಾವ್ಯದಲ್ಲೂ ಬೆಳಸಿದ್ದಲ್ಲದೆ, ಅರ್ಜುನನ ಸಾಹಸದ ದೃಷ್ಟಿಯಿಂದಲೇ ಭಾರತಕಥೆಯನ್ನು ನಿರೀಕ್ಷಿಸಿದನು.

'ಒತ್ತಿ ತಱುಂಬಿ[1] ನಿಂದ ರಿಪುಭೂಜಸಮಾಜದ ಬೀರ್ಗಳಂ ನಭ-
ಕ್ಕೆತ್ತದೆ, ಬಂದು ತನ್ನ ಮುಱಿವೊಕ್ಕೊಡೆ ಕಾಯದೆ, ಚಾಗದೊಳ್ಪಿನ- ಅ-
ಚ್ಚೊತ್ತದೆ ಮಾಣ್ದು ಬಾೞ್ವ ಪುೞುವಾನಸ[2]ನೆಂಬನ- ಅಜಾಂಡ-
ಮೆಂಬುದೊಂ-
ದತ್ತಿಯ ಪಣ್ಣೊಳಿರ್ಪ ಪುೞುವಲ್ಲವೆ ಮಾನಸನೇಂ ಮುರಾಂತಕಾ !

ಎಂದು, ಅರ್ಜುನನ ಬಾಯಿಂದಲೇ ವೀರಜೀವನದ ಗುರಿಯನ್ನು ಉದ್ಘೋಷಿಸಿ, ಅದನ್ನೆಲ್ಲಾ ಅವನು ಸಾಧಿಸಿದ ಪ್ರಸಂಗಗಳನ್ನು 'ವಿಕ್ರಮಾರ್ಜುನ ವಿಜಯ'ದ ತುಂಬ ವಿಸ್ತರಿಸಿದನು. ಶತ್ರುಮಿತ್ರರೆಲ್ಲರಿಂದಲೂ ಒಂದೇ ಸಮನಾಗಿ ಅರ್ಜುನನ ಮಹತ್ತ್ವವನ್ನು ಹೊಗಳಿಸಿದನು. ಭಾರತಸಂಗ್ರಾಮ ನಡೆಯುವಾಗ ಕುರುಕ್ಷೇತ್ರದ ಒಂದು ಮೂಲೆಯಲ್ಲಿ ಸಂಶಪ್ತಕರೊಡನೆ ನಿತ್ಯ ಕಾಳಗಮಾಡುತ್ತಿದ್ದರೂ ಅರ್ಜುನನು ನಮ್ಮ ಕಣ್ಣಿಗೆ ಮರೆಯಾಗುವುದಿಲ್ಲ. ಸೈಂಧವವಧೆ, ಕರ್ಣವಧೆ ಮೊದಲಾದ ಮಹಾ ಸಂದರ್ಭಗಳಿರಲಿ. ಪಾಂಡವ ದಳಕ್ಕೆ ಸೋಲಾಗುವ ಸೂಚನೆ ಬಂದಿತೆಂದರೆ, ಅರ್ಜುನನ ರಥ ಅಲ್ಲಿಗೆ ಹಾಯ್ದು ಬರುತ್ತದೆ,

---

[1] ತಱುಂಬಿ — ಅಡ್ಡಗಟ್ಟಿ; [2] ಪುೞುವಾನಸ — ಅಲ್ಪಮನುಷ್ಯ.

ವಿಜಯ ಕೈಸೇರುತ್ತದೆ. ಎಷ್ಟೋಸಲ ಭೀಮಸೇನನನ್ನು ಕೂಡ ಅರ್ಜುನನು ಶತ್ರುಗಳ ಕಾಟದಿಂದ ಪಾರುಮಾಡುತ್ತಾನೆ.

ಇನ್ನು, ಕೌರವಧ್ವಂಸವಾದಮೇಲೆ ರಾಜ್ಯಾಭಿಷೇಕದ ಸಮಯವೊದಗುತ್ತದೆ. ಪಾಂಡವರಲ್ಲಿ ಹಿರಿಯನಾದ ಯುಧಿಷ್ಠಿರನೇ ನ್ಯಾಯವಾಗಿ ಪಟ್ಟಕಟ್ಟಿಸಿಕೊಳ್ಳಬೇಕು. ಆದರೆ—

'ಪ್ರಾಯದ ಪೆಂಪೆ ಪೆಂಪೆಮಗೆ! ಮೀಱಿದರಂ ತವೆ ಕೊಂದ ಪೆಂಪು, ಕ-
ಟ್ಟಾಯದ ಪೆಂಪು, ಶಕ್ರನೊಡನೇಱಿದ[1] ಪೆಂಪು- ಇವು ಪೆಂಪುವೆತ್ತು ನಿ-
ಟ್ಟಾಯುಗಳಾಗಿ[2] ನಿನ್ನೊಳಮರ್ದಿರ್ದುವು. ನೀಂ ತಲೆವೀಸದೆ- ಉರ್ವರಾ-
ಶ್ರೀಯನ್- ಇದಾಗದೆನ್ನದೆ- ಒಳಕೊಳ್ ಪರಮೋತ್ಸವದಿಂ ಗುಣಾ-
ರ್ಣವಾ!'

"ನಮಗೆ ವಯಸ್ಸಿನ ಹಿರಿಯತನವೇ ಹಿರಿಯತನ. ಶೌರ್ಯಮಹಿಮೆಗಳ ಹಿರಿಯತನ ನಿನ್ನದು; ನೀನೇ ರಾಜ್ಯಲಕ್ಷ್ಮಿಯನ್ನು ವರಿಸು; ಒಲ್ಲೆನೆಂದು ತಲೆಯಲ್ಲಾಡಿಸಬೇಡ" ಎಂದು ಧರ್ಮರಾಜನು ತಾನೇ ಮುಂದೆ ಬಂದು ಅರ್ಜುನನನ್ನು ಒಪ್ಪಿಸಿ ಸಿಂಹಾಸನದ ಮೇಲೆ ಕುಳ್ಳಿರಿಸುತ್ತಾನೆ!

ಪಂಪಭಾರತದಲ್ಲಿ ಅರ್ಜುನನಿಗೆ ನಾಯಕಪಟ್ಟ ದೊರೆತ ಮೇಲೆ, ಅವನ ಪ್ರತಿಸ್ಪರ್ಧಿಯಾದ ಕರ್ಣನಿಗೂ ಪ್ರಾಮುಖ್ಯ ಸಹಜವಾಗಿಯೇ ದೊರೆಯಿತು. ದುರ್ಯೋಧನನ ಛಲದಿಂದಲೇ ಭಾರತಯುದ್ಧವು ಒದಗಿತೆಂಬುದು ನಿಜ; ಅವನು ಮಡಿಯುವ ತನಕ ಆ ಕಿಚ್ಚು ನಂದಲಿಲ್ಲವೆಂಬುದು ನಿಜ. ಆದರೆ ಪಂಪನ ಮನಸ್ಸನ್ನು ಕರ್ಣನು ಸೆಳೆದಷ್ಟು ದುರ್ಯೋಧನನು ಸೆಳೆದಿಲ್ಲ. 'ದುಶ್ಶಾಸನ ಕರ್ಣ ಶಕುನಿ ಸೈಂಧವರೆಂಬ ದುಷ್ಟಚತುಷ್ಟಯ' ದಲ್ಲಿ ಕರ್ಣನನ್ನೂ ಒಮ್ಮೆ ಪಂಪನು ಸೇರಿಸಿದ್ದರೂ, ಅದೊಂದು

[1] ಶಕ್ರನೊಡನೇಱಿದ — ಇಂದ್ರನೊಡನೆ ಒಂದೇ ಪೀಠದಲ್ಲಿ ಕುಳಿತ;
[2] ನಿಟ್ಟಾಯುಗಳಾಗಿ — ಚಿರಕಾಲ ನಿಲ್ಲುವವುಗಳಾಗಿ.

ಕ್ಷಣಿಕವಾದ ಆಪಾದನೆ; ಅಷ್ಟೆ. ಪಂಪನ ಹೃದಯದ ಅಂತ ರಾಳದಲ್ಲಿ ಕರ್ಣನ ದುರ್ದೈವವನ್ನು ಕುರಿತು ವಿಶೇಷ ಮರುಕ ವಿದೆ, ಅವನ ಮಹಾಸತ್ತ್ವವನ್ನು ಕುರಿತು ವಿಶೇಷ ಗೌರವವಿದೆ. ಇದರ ಮೇಲೆ, ಪಂಪನ ದೃಷ್ಟಿಯಲ್ಲಿ ಕರ್ಣವಧೆ ಭಾರತ ಸಂಗ್ರಾಮದ ಕೇಂದ್ರದೃಶ್ಯ ಮಾತ್ರವಲ್ಲ, ಅದರ ಕೊನೆಯ ಗುರಿಯೂ ಹೌದು. 'ಕರ್ಣಂಗೊಡ್ಡಿತ್ತು ದಲ್ ಭಾರತಂ!'— ಈ ಮಾತನ್ನು ಕೃಷ್ಣನ ಬಾಯಲ್ಲಿ ಪಂಪನು ಆಡಿಸುತ್ತಾನೆ; ಅಷ್ಟೇ ಸಾಲದೆಂಬಂತೆ ಅರ್ಜುನನಿಂದಲೂ ಹೇಳಿಸಿ ದೃಢಪಡಿಸು ತ್ತಾನೆ. ಕುಂತಿಯ ಈ ಚೊಚ್ಚಲು ಮಗನನ್ನು ಆಹುತಿಯಾಗಿ ತೆಗೆದುಕೊಳ್ಳುವುದಕ್ಕಾಗಿಯೇ ಅಷ್ಟು ಭೀಷಣವಾದ ರಣ ಯಜ್ಞ ಒಡ್ಡಿತೇನೋ! ತಾನು ಸೂತಪುತ್ರನಲ್ಲ, ಪಾಂಡವರಿಗೆ ಸೋದರನಾಗಬೇಕು ಎಂದು ಕರ್ಣನು ಕೇಳಿದ ಬಳಿಕ ಮನ ಸ್ಸನ್ನು ಸ್ವಲ್ಪ ಸಡಿಲಿಸಿದ್ದರೆ ಭಾರತದ ಕಥೆಯೇ ಬೇರೆಯ ದಾರಿಯನ್ನು ಹಿಡಿಯುತ್ತಿತ್ತು. ಕಡೆಗೆ ಪಾಂಡವರಿಗಾದರೂ ಇವನು ತಮ್ಮ ಹಿರಿಯಣ್ಣನೆಂದು ಮುಂಚೆ ಗೊತ್ತಾಗಿದ್ದರೂ ಚೆನ್ನಾಗಿತ್ತು. ಆದರೆ, ತನ್ನ ಕಣ್ಣ ಮುಂದೆ ಬೆಳೆದ ಐವರು ಮಕ್ಕಳನ್ನು ಉಳಿಸಿಕೊಳ್ಳುವುದಕ್ಕಾಗಿ, ತಾನು ಹೆತ್ತಾಗಲೇ 'ನಿಧಾನಮನ್- ಈಡಾಡುವಂತೆ' ಗಂಗೆಯ ನೀರಿನಲ್ಲಿ ತೊರೆದು ಬಿಟ್ಟಿದ್ದ ಈ ಒಬ್ಬನನ್ನು ಕುಂತಿ ಬಲಿಗೊಟ್ಟಳು. ಕುಲಕ್ಷಯವು ಸಂಪೂರ್ಣವಾದ ಮೇಲೆ,

'ಕೊಂತಿ ಬಂದು, ಕರ್ಣನ ಕಳೇವರಮಂ ತೞ್ಕೈಸಿಕೊಂಡು, ಪಾಂಡವರಯ್ವರುಮನ್- ಅಲ್ಲಿಗೆ ಬರಿಸಿ—

ನಿಮ್ಮಣ್ಣನ್-, ಎನ್ನ ಪಿರಿಯ ಮ-
ಗಂ, ಮಾತೇಂ ಕರ್ಣನ್-. ಆಂ ಮಹಾಪಾತಕಿಯೆಂ!

ನಿಷ್ಠುರಯ ಮೋಹದಿನ್- ಈತಂ-
ಗೆ- ಆಂ ಮಾಡಿವೆನ್- ಇನಿತನೆಂದು ಶೋಕಂಗೆಯ್ದುಳ್.

ಆ ಮಾತನ್ನು ಕೇಳಿ ಪಾಂಡವರಿಗೂ ಅಳಲು ಉಕ್ಕಿಬಂದು—

ಅಱಿಪಿದರಾರುಮಿಲ್ಲೆಮಗೆ ನೀನೆಮಗಣ್ಣನಯ್- ಎಂದು. ಮುನ್ನ ಮಾಂ-
ಅಱಿದೊಡೆ, ಪಟ್ಟಮುಂ ನೆಲನುಮುಂ ನಿನಗಿತ್ತು ಕುರುಪ್ರಧಾನನೊಳ್
ಕಱುಪ[1]ನೆ ಸಿಚ್ಚಟಂ[2] ಬಿಸುಟು ನಿನ್ನಯ ಪೇೞ್ದುದು ಗೆಯ್ದು,
ಪಾೞಿ[3]ಯಂ
ಮೆಱೆಯುವೆ ಬಾಯ ತಂಬುಲದೊಳಂ ಮಡಗೂೞೊ[4]ಳಂ- ಅಂಗವಲ್ಲಭಾ!

ಎಂದು ಅವರು ಹಲುಬಿದರು. ಆ ರೀತಿ ಅವರು ಖಂಡಿತವಾಗಿ ಮಾಡುತ್ತಿದ್ದರು. ದುರ್ಯೋಧನನ ಮೇಲಿನ ಕೋಪವನ್ನು ತೊರೆದು, ಕರ್ಣನಿಗೆ ವಿಧೇಯರಾಗಿ ಅವನು ಅನುಭವಿಸಿ ಬಿಟ್ಟದ್ದೇ ಪರಮಪ್ರಸಾದವೆಂದು ಭಾವಿಸಿಕೊಂಡು ಬಾಳುತ್ತಿದ್ದರು; ಕರ್ಣನನ್ನು ಕೊಲ್ಲುವ ಬದಲು ಅರ್ಜುನನು ಅವನ ಪಾದಪೀಠದ ಬಳಿ ನಿಂತು ಓಲೈಸುತ್ತಿದ್ದನು. ಇತ್ತ ದುರ್ಯೋಧನನಿಗಾದರೆ, ಪಂಪಭಾರತದ ಕಥೆಯ ಪ್ರಕಾರ, ಕರ್ಣನು ಯಾರೆಂಬುದು ಮೊದಲೇ ಗೊತ್ತಿತ್ತು; ಕರ್ಣನಿಗೆ ರಾಜ್ಯವನ್ನು ಒಪ್ಪಿಸಿ ಅವನ ಅಧೀನದಲ್ಲಿ ತಾನು ಬಾಳಬೇಕೆಂಬ ಉದ್ದೇಶವೂ ಇತ್ತು. ಆದರೆ ಆ ಕಾರ್ಯವನ್ನು ಮಾಡಲು ದುರ್ಯೋಧನನು ಏಕೋ ತಡಮಾಡಿದನು; ಅಷ್ಟರಲ್ಲೇ, ಅವನಿಗೂ ಭೀಮನಿಗೂ ಕೋಪ ಮಸಗಿ, ವೈರ ಬೆಳೆದು, ಉರಿ ಹೊತ್ತಿದ ಯುದ್ಧದಲ್ಲಿ ಕರ್ಣನು ಸುಟ್ಟುಹೋದನು:

ಉದಧಿತರಂಗ ತಾಟಿತ ಧರಾತಳಮುಂ ನಿನಗಿತ್ತು, ನಿನ್ನ ಕೊ-
ಟ್ಟುದನೆ ಪಸಾದಮೆಂದು ಪೊಡೆವಟ್ಟು ಮನೋಮುದದಿಂದೆ ಕೊಂಡು ಬಾ-

[1] ಕಱುಪು—ಕ್ರೋಧ; [2] ಸಿಚ್ಚಟಂ—ನಿಶ್ಚಲವಾಗಿ; [3] ಪಾೞಿ—ಕ್ರಮ;
[4] ಮಡಗೂೞ್—ಉಂಡು ಬಿಟ್ಟ ಅನ್ನ.

ಟ್ಟಿದುವೆ ಬಯಕ್ಕೆ ಮುಂ ; ನಿನಗದಂ ಕಿಡಿಪಂದು- ಎಲೆ ಕರ್ಣ,
ಕೇತು[1]ವಾ-
ದುದು ನಿನಗೆ- ಆ ವೃಕೋದರನ ಕಾಯ್ಪು[2]ನೆ ಪೊತ್ತಿಸಿದೆನ್ನ ಕಾಳೆಗಂ !

ಎಂದು ಕರ್ಣನನ್ನು ಕಳೆದುಕೊಂಡ ಮೇಲೆ ದುರ್ಯೋಧನನು ರೋದಿಸುತ್ತಾನೆ. ಕಲಹ ಬೆಳೆಯದೆ ಇದ್ದರೆ ಎರಡು ಪಕ್ಷದವರೂ ಕರ್ಣನ ಆಶ್ರಯದಲ್ಲಿ ಹೊಂದಿಕೊಂಡು ಬಾಳಬಹುದಾಗಿತ್ತು. ಆದರೆ ಹುಟ್ಟಿದ ಘಳಿಗೆಯಿಂದಲೇ ಕರ್ಣನ ಬೆನ್ನು ಹತ್ತಿ ಅವನಿಗೆ ತಾಯ ಒಲುಮೆಯನ್ನೂ ಕುಲದ ಹಿರಿಮೆಯನ್ನೂ ತಪ್ಪಿಸಿದ್ದ ದುರ್ದೈವದ ಸಂಕಲ್ಪವೇ ಬೇರೆಯಾಗಿತ್ತು!

ದ್ರೋಣಾಚಾರ್ಯನ ಕೈಕೆಳಗೆ ಹಸ್ತಿನಾವತಿಯ ರಾಜಪುತ್ರರೊಡನೆ ತಾನೂ ಶಸ್ತ್ರಾಭ್ಯಾಸಮಾಡುವುದಕ್ಕಾಗಿ, 'ಕೌರವರ್ಗೆಲ್ಲಂ ಪ್ರಾಣಂ ಬರ್ಪಕೃತಿಯೊಳೆ ಬಾಣಾಸನ ಬಾಣಪಾಣಿ ಕರ್ಣಂ ಬಂದಂ' ಎಂದು ಪಂಪನು ನಿರೂಪಿಸುತ್ತಾನೆ. ಈ ಧನುರ್ಧಾರಿ ಕೌರವರಿಗೆ ಮಾತ್ರ ಪ್ರಾಣವಾಗಿ ಬರಲಿಲ್ಲ; ಪಂಪಭಾರತಕ್ಕೇ ಪ್ರಾಣವಾಗಿ ಬಂದನು. ಅವನ ತ್ಯಾಗದ, ಸ್ನೇಹದ, ಕೆಚ್ಚಿನ, ಪೌರುಷದ ಸನ್ನಿವೇಶ ಬಂದಿತೆಂದರೆ ಪಂಪನ ಕೊರಳು ಉಬ್ಬುತ್ತದೆ, ಕವಿತೆ ಉಕ್ಕುತ್ತದೆ. ಪಂಪಭಾರತದ ಮೊದಲಿನ ಎಂಟು ಆಶ್ವಾಸಗಳಲ್ಲಿ, ಗೋಗ್ರಹಣ ವೃತ್ತಾಂತದ ಕೊನೆಯವರೆಗೆ, ಕರ್ಣನ ವಿಚಾರ ಹೆಚ್ಚಾಗಿ ಬರಲು ಅವಕಾಶವಿಲ್ಲ;—ಅದೆಲ್ಲಾ ವಿಕ್ರಮಾರ್ಜುನನ ಏಕಾಂಗ ಸಾಹಸದ ಕ್ಷೇತ್ರ. ಆ ಬಳಿಕ ಸಂಧಿಯ ಪ್ರಯತ್ನ ಮುರಿದು ಬಿದ್ದು, ಯುದ್ಧವು ಒಡ್ಡಿದಮೇಲೆ ಕರ್ಣನು ಮುಂದೆ ಬಂದು ನಿಲ್ಲುತ್ತಾನೆ; ರಂಗದ ಮಧ್ಯಭಾಗವನ್ನೇ ಆಕ್ರಮಿಸುತ್ತಾನೆ.

---

[1] ಕೇತು — ಧೂಮಕೇತು ; [2] ಕಾಯ್ಪು — ಕೋಪ.

ತನ್ನ ಜನನದ ಗುಟ್ಟನ್ನು ಕೃಷ್ಣನು ಕಿವಿಯಲ್ಲಿ ಊದಿ ಹೋದಮೇಲೆ ಕರ್ಣನಿಗೊಂದು ಸಮಸ್ಯೆ ಒದಗಿತು. ತಾನು ಅಂಬಿಗನ ಮಗನೆಂದೇ ಅದುವರೆಗೂ ಅವನು ನಂಬಿದ್ದನು; ತನಗಿಲ್ಲದೆ ಹೋದ ಕುಲಗೌರವಕ್ಕೆ ಹತ್ತುಪಾಲು ಮಿಗಿಲಾಗಿ ಕಲಿತನದ ಗೌರವವನ್ನು ಬೆಳಸಿಕೊಂಡಿದ್ದನು. ದಿಕ್ಕಿಲ್ಲದ ತನಗೆ ರಾಜ್ಯವನ್ನು ಕೊಟ್ಟು ಒಂದೇ ಹೃದಯವನ್ನು ತನ್ನೊಡನೆ ಸಮಭಾಗಮಾಡಿಕೊಂಡಿದ್ದ ದುರ್ಯೋಧನನ ಹಗೆಯೇ ತನ್ನ ಹಗೆಯೆಂದು, ಅವನು ಪಾಂಡವರನ್ನು ಏಕನಿಷ್ಠೆಯಿಂದ ದ್ವೇಷಿಸುತ್ತಿದ್ದನು. ಈಗಲಾದರೋ, ಅವರು ತನ್ನ ತಮ್ಮಂದಿರೆಂದು ಗೊತ್ತಾಯಿತು. ಪ್ರಾಣಮಿತ್ರನನ್ನು ಕೈಬಿಟ್ಟು ಈ ಹೊಸ ನಂಟರೊಡನೆ ಸೇರಿಕೊಳ್ಳುವ ಆಲೋಚನೆ ಅವನಿಗೆ ಕ್ಷಣಮಾತ್ರವೂ ಹೊಳೆಯಲಿಲ್ಲ; ಆದರೆ ತನ್ನ ಸೋದರರೆಂದು ಗೊತ್ತಾದಮೇಲೆ ಅವರನ್ನು ಕೊಲ್ಲುವುದು ಹೇಗೆ ಎಂಬ ಚಿಂತೆ ಹುಟ್ಟಿತು:

**ಅಱಿದೆಂ ಸೋದರರೆಂದು ಪಾಂಡವರನ್. ಇನ್ನೆಂತೆನ್ನರಂ ಕೊಲ್ವೆನ್ ; ಅ-**
**ಟ್ಕಱಿಯೊಳೆನ್ನಂ ಪೊರೆದೆಯ್ದೆ ನಂಬಿದ ನೃಪಂಗೆಂತು- ಆಜಿ[1]ಯೊಳ್**
**ತಪ್ಪುವೆಂ !—**

ಎಂಥ ಕಠಿನ ಸಮಸ್ಯೆ!—ತಮ್ಮಂದಿರನ್ನು ಕಾಯಲೂ ಬೇಕು; ನೆಚ್ಚಿದ ಒಡೆಯನಿಗಾಗಿ ಕಾದಲೂ ಬೇಕು. ಕರ್ಣನ ಪಾಲಿಗೆ ಈ ಎರಡು ಕರ್ತವ್ಯಗಳೂ ಒಂದಕ್ಕೊಂದು ಎದುರಾಗಿ ನಿಂತುಬಿಟ್ಟುವು. ಇಷ್ಟೇ ಸಾಲದೆಂಬಂತೆ, ಕುಂತಿ ಬೇರೆ ಬಂದು ತನ್ನ ತಾಯ್ತನಕ್ಕೆ ಕಾಣಿಕೆಯಾಗಿ "ಅರ್ಜುನನ ಮೇಲೆ ಪುಱಿಗಣೆ[2]ಯನ್ನು ತೊಡುವುದಿಲ್ಲ, ಮಿಕ್ಕವರು ಕೈಗೆ ಸಿಕ್ಕಿದರೂ ಕೊಲ್ಲುವುದಿಲ್ಲ" ಎಂಬ ಭಾಷೆಯನ್ನು ಕರ್ಣನಿಂದ ಪಡೆದಳು. ಈ ಧರ್ಮಸಂಕಟದಲ್ಲಿ ಅವನು ಏನುಮಾಡಬೇಕು? ಆದಷ್ಟು ಶೌರ್ಯದಿಂದ

---

[1] ಆಜಿ—ಯುದ್ಧ ; [2] ಪುಱಿಗಣೆ—ದಿವ್ಯಾಸ್ತ್ರ(?).

ಯುದ್ಧಮಾಡಿ ರಣರಂಗದಲ್ಲಿ ತನ್ನ ಜೀವವನ್ನೇ ತೆತ್ತುಬಿಡುವುದೆಂದು ನಿರ್ಧರಿಸಿದನು.

ಕರ್ಣನಿಗೆ ಒಡ್ಡಿದ ಸಮಸ್ಯೆಯೇ ಭಾರತಸಂಗ್ರಾಮದ ತಿರುಳು. ಒಂದು ಕುಲದೊಳಗೆ ಅಂತಃಕಲಹವು ಹುಟ್ಟಿದರೆ, ಒಂದೇ ರಕ್ತದಿಂದ ಜನಿಸಿದವರಲ್ಲಿ ಕೆಲವರು ಅತ್ತ ಕೆಲವರು ಇತ್ತ ನಿಂತು ಸೆಣಸಬೇಕಾಗಿ ಬಂದರೆ ಇಂಥ ಧರ್ಮಸಂಕಟವೊದಗಲೇ ಬೇಕು; ಕರ್ತವ್ಯ ಹೀಗೆ ಕವಲೊಡೆಯಲೇಬೇಕು. —ಈ ಮನಃಕ್ಷೋಭೆಯ ಕರಾಳಚ್ಛಾಯೆ ಭಾರತಯುದ್ಧದ ಒಟ್ಟು ಕಥೆಯನ್ನೇ ಮುಸುಕಿದೆ. ಹಾಗೆ ನೋಡಿದರೆ ಕರ್ಣನೇ ವಾಸಿ. ಯುದ್ಧವನ್ನಾದರೂ ಶ್ರದ್ಧೆಯಿಂದ ಮಾಡಿದನು; ದುರ್ಯೋಧನನು ತನ್ನಲ್ಲಿಟ್ಟಿದ್ದ ನೆಚ್ಚಿಕೆಗೆ ತಕ್ಕಂತೆ ನಡೆಯಲು ಮನಃಪೂರ್ವಕವಾಗಿ ಹೆಣಗಿದನು. ಭೀಷ್ಮ, ದ್ರೋಣ, ಶಲ್ಯ ಮೊದಲಾದ ಕೌರವಪಕ್ಷದ ವೀರರನ್ನು ಕುರಿತು ಈ ಪ್ರಶಂಸಾವಾಕ್ಯವನ್ನೂ ಆಡುವಂತಿಲ್ಲ. ಇವರು ದುರ್ಯೋಧನನ ದಾಕ್ಷಿಣ್ಯವನ್ನೂ ಬಿಡಲಾರರು; ಪಾಂಡವರ ಮೇಲಿನ ವಿಶ್ವಾಸವನ್ನೂ ತೊರೆಯಲಾರರು. ಉದಾಹರಣೆಗೆ, ದುರ್ಯೋಧನನಿಂದ ಸೇನಾಧಿಪತ್ಯವನ್ನು ಹೊಂದಿದಮೇಲೆ ಭೀಷ್ಮನು ತನಗೇ ಹೇಳಿಕೊಳ್ಳುವ ಈ ಮಾತುಗಳನ್ನು ಗಮನಿಸಿ:

ಎನ್ನನೆ ನಚ್ಚಿದನ್-, ಅನುವರ-
ಕೆ[1]- ಎನ್ನನೆ ಪೂಣಿಸಿದನ್[2]-. ಎನಗೆ- ಎರಡು ತಂಡಮುಂ- ಓ-
ರನ್ನರೆ[3] ದಲ್; ಎಂತು ಕಾದುವೆ-
ನೆನ್ನಯ ಮಕ್ಕಳೊಳಮೆನ್ನ ಮೊಮ್ಮಕ್ಕಳೊಳಂ !—

---

[1] ಅನುವರಕೆ—ಯುದ್ಧಕ್ಕೆ ; [2] ಪೂಣಿಸಿದನ್—ಪ್ರತಿಜ್ಞೆ ಮಾಡಿಸಿದನು ;
[3] ಓರನ್ನರೆ—ಒಂದೇ ಬಗೆಯುವರು.

ಇದೇ ಅವನ ಕಷ್ಟ! ಇದರಿಂದ ಎಷ್ಟೋ ಸಲ ಅವನು ಮೇಲುಮೇಲೆ ತೋರಿಕೆಗಾಗಿ ಯುದ್ಧಮಾಡುತ್ತಾನೆ. ಇವನ ವರ್ತನೆಯನ್ನು ದುರ್ಯೋಧನನು ಕಂಡು, "ಪಾಂಡವರ ನಂಟ ತನವನ್ನೇ ನೀವು ನೆನೆಯುತ್ತಿದ್ದೀರಿ, ನನ್ನ ಅನ್ನದ ಋಣವನ್ನೂ ಸ್ವಲ್ಪ ನೆನೆಯಿರಿ" ಎಂದು ಮೂದಲಿಸಿದಾಗ ಮಾತ್ರ ಅತಿಶಯ ಶೌರ್ಯದಿಂದ ಹೋರಾಡುತ್ತಾನೆ. ಕಡೆಗೆ, ಜೀವಕ್ಕೆ ಬೇಸತ್ತು ತನ್ನ ಮರಣದ ಉಪಾಯವನ್ನು ಪಾಂಡವರಿಗೆ ತಾನೇ ಬೋಧಿ ಸುತ್ತಾನೆ. ದ್ರೋಣ ಶಲ್ಯರ ಮಾತೂ ಇಲ್ಲಿಗೇ ಮುಟ್ಟುತ್ತದೆ.– ಇವರೆಲ್ಲರೂ ಮನಸ್ಸನ್ನು ಕಲ್ಲುಮಾಡಿಕೊಂಡು ಯಾವುದಾದರೂ ಒಂದು ಪಕ್ಷವನ್ನು ಪಟ್ಟು ಹಿಡಿಯಬಾರದಾಗಿತ್ತೆ? ಅಮಿತ ಸಂಖ್ಯೆಯ ಶತ್ರುಸೇನೆಯನ್ನು ಲೀಲೆಯಿಂದ ತರಿದೊಟ್ಟುತ್ತಿದ್ದ ಈ ಮಹಾಶೂರರು ತಮ್ಮ ಹೃದಯದೌರ್ಬಲ್ಯವನ್ನು ಮಾತ್ರ ಜಯಿಸಲಾರದೆ ಹೋದರು. ಕುಟುಂಬಕಲಹದ ದುರಂತ ಪರಿಣಾಮವೇ ಇದು.

ಕೌರವಪಕ್ಷದ ಅಪಜಯಕ್ಕೆ ಇನ್ನೊಂದು ಕಾರಣವಿತ್ತು. ದುರ್ಯೋಧನನು ಯಾರ ಸಹಾಯವನ್ನು ನೆಚ್ಚಿಕೊಂಡಿದ್ದನೋ ಆ ಪ್ರಮುಖರಿಗೆಲ್ಲ ಕರ್ಣನಲ್ಲಿ ವೈಮನಸ್ಯವಿತ್ತು. ಭೀಷ್ಮ ದ್ರೋಣ ಅಶ್ವತ್ಥಾಮ ಶಲ್ಯ ಮೊದಲಾದವರಿಗೆಲ್ಲ ಕರ್ಣನು ಕುಲಹೀನನೆಂದು ತಿರಸ್ಕಾರ; ಅವನನ್ನು ದುರ್ಯೋಧನನು ಉಬ್ಬಿಸಿದ್ದಾನೆಂದು ಅಸಮಾಧಾನ. ಇತ್ತ ಕರ್ಣನಿಗಾದರೆ ಇವರೆಲ್ಲರ ಸೊಕ್ಕನ್ನು ಕಂಡು ರೋಷ; ದುರ್ಯೋಧನನ ಅನ್ನ ವನ್ನುಂಡು ಅವನಿಗೇ ಎದುರುಬೀಳುವ ಸ್ವಭಾವವನ್ನು ಕಂಡು ಅಪನಂಬಿಕೆ. ಹೀಗಾಗಿ ಎಷ್ಟೋ ಸಂದರ್ಭಗಳಲ್ಲಿ ಇವರಿವರ ಹುರುಡು ಹಗೆತನಕ್ಕೆ ತಿರುಗಿಬಿಡುತ್ತಿದ್ದಿತು. ಒಂದು ಸಲ ಅಶ್ವ ತ್ಥಾಮನಿಗೂ ಕರ್ಣನಿಗೂ ಹತ್ತಿದ ಜಗಳ ಕೈಮೀರಿದಾಗ,

ಅಸವಳಮಾಗಿಯುಂ- ಈ ನ-
ಮ್ಮ ಸೈನ್ಯಂ- ಇಂತೊರ್ವರೊರ್ವರೊಳ್ ಸೆಣಸಿ ಖಳ-
ವ್ಯಸನದೊಳ್ ಕೆಟ್ಟುದಲ್ಲದೊ-
ಡೆ ಸುಯೋಧನ ನಿನಗೆ ಮಲೆವ ಮಾರ್ಮಲಮೊಳವೇ ?

ಎಂದು ಕೃಪನು ವ್ಯಸನದಿಂದ ಹೇಳುತ್ತಾನೆ. ಶತ್ರುಗಳಮೇಲೆ ಒಗ್ಗಟ್ಟಿನಿಂದ ಕೈಮಾಡಬೇಕಾದ ಸಮಯದಲ್ಲಿ ಈ ಶೂರರು ಕೋಪಾವೇಶದಿಂದ ಸಮರತ್ಯಾಗಮಾಡುವುದಕ್ಕೂ ಹಿಂಜರಿಯುತ್ತಿರಲಿಲ್ಲ.

ಭೀಷ್ಮ-ಕರ್ಣರಿಗೆ ಸ್ಪರ್ಧೆ ಹುಟ್ಟಿ ವಿರಸಕ್ಕೆ ತಿರುಗಿದ ಒಂದು ಪ್ರಸಂಗವನ್ನು ಪಂಪನು ಬಲು ಸೊಗಸಾಗಿ ನಿರೂಪಿಸಿದ್ದಾನೆ; ಅವರಲ್ಲಿ, ಅವರವರು ಆಡಿದ ಎರಡು ಮಾತಿನಲ್ಲೇ ಅವರವರ ಶೀಲಸತ್ತ್ವಗಳು ಪ್ರಕಾಶವಾಗುವಂತೆ ರಚಿಸಿದ್ದಾನೆ. ಈ ಸಂದರ್ಭವನ್ನು ಸ್ವಲ್ಪ ವಿಶದವಾಗಿ ಪರಿಶೀಲಿಸಿದರೆ ಪಂಪನ ಪಾತ್ರರಚನೆ ರಸಪೋಷಣೆಗಳ ರೀತಿ ಚೆನ್ನಾಗಿ ವ್ಯಕ್ತವಾಗುತ್ತದೆ.

ಭೀಷ್ಮನಿಗೆ ವೀರಪಟ್ಟವನ್ನು ಕಟ್ಟಿ, ಹಗೆಗಳನ್ನೆಲ್ಲಾ ನನ್ನ ಮಂಚದ ಕಾಲಿಗೆ ಕಟ್ಟಿದೆನೆಂದು ದುರ್ಯೋಧನನು ಹಿಗ್ಗುತ್ತಿದ್ದನು. ಈ ಮುಪ್ಪಿನ ಮುದುಕನು ಶತ್ರುಗಳನ್ನು ಹೇಗೆ ಎದುರಿಸಿ ನಿಲ್ಲಬಹುದು, ತಾನೇ ಸಾಕಿದ ಮೊಮ್ಮಕ್ಕಳೊಡನೆ ಹೇಗೆ ಮನಸ್ಸಿಟ್ಟು ಕಾದಬಹುದು—ಎಂದು ಕರ್ಣನಿಗೆ ಪ್ರಬಲವಾದ ಸಂದೇಹ; ಪಟ್ಟವನ್ನು ತನಗೆ ಕಟ್ಟಲಿಲ್ಲವಲ್ಲಾ ಎಂದು ಅಸಮಾಧಾನ ಬೇರೆ. ಆಗ—

ಭಗವತಿಯೇಱುವೇಱ್ವ ತೆಱದಿಂ ಕಥೆಯಾಯ್ತು ವರೇಱು[1] ; ನೀನಿದಂ
ಬಗೆದು- ಇವರಿನ್ನುಂ- ಆಂತೞಿವರೆಂದು ವಿಮೋಹಿಸಿ ವೀರಪಟ್ಟಮಂ

---

[1] ಕಥೆಯಾಯ್ತು ವರೇಱು — ಇವರ ಪರಾಕ್ರಮವೆಲ್ಲ ಕಥೆಯ ಮಾತಾಯಿತು.

ಬಗೆಯುವೆ ಕಟ್ಟಿದ್ದೈ : ಗುರುಗಳಂ ಕುಲವೃದ್ಧರನ್- ಆಜಿಗುಯ್ದು ಕೆ-
ಮ್ಮಗೆ[1] ಪಗೆವಾಡಿಯೊಳ್[2] ನಗಿಸಿಕೊಂಡೊಡೆ ಬಂದಪುದೇಂ ಸುಯೋಧನಾ!

ಎಂದು ಕರ್ಣನು ತುಂಬಿದ ಸಭೆಯಲ್ಲಿ ಹಾಸ್ಯಮಾಡುತ್ತಾನೆ. ಈ ಕಂಗೆಟ್ಟ ಮುದುಕನಿಗೆ ಬದಲು ನನಗೆ ವೀರಪಟ್ಟವನ್ನು ಕಟ್ಟು ಎಂದು ದಿಟ್ಟತನದಿಂದ ಸೂಚಿಸುತ್ತಾನೆ. ಕರ್ಣನ ಈ ಅವಿನಯದ, ಅಹಂಕಾರದ ಮಾತುಗಳನ್ನು ಕೇಳಿ ಋಜು ಸ್ವಭಾವದ ದ್ರೋಣಾಚಾರ್ಯನು ಸಿಡಿದೆದ್ದು ನಿಂತನು. ‘ ಸಿಂಗದ ಮುಪ್ಪುಂ ನೆಗಪ್ಪ್ದೇ ಗಾಂಗೇಯರ ಮುಪ್ಪುಂ- ಇಳಿಕೆ ವಡೆಗುಮೆ ! ’ ಎಂದು ಗರ್ಜಿಸಿದನು. ಅಷ್ಟಕ್ಕೇ ನಿಲ್ಲದೆ,

ಕುಲಜರನ್- ಉದ್ಧತರಂ ಭುಜ-
ಬಲಯುತರಂ ಹಿತರನ್- ಈ ಸಭಾಮಧ್ಯದೊಳ್- ಅ-
ಗ್ಗಲಿಸಿದ ಮುಪಡಿಂ ನಾಲಗೆ
ಕುಲಮಂ ತುಬ್ಬ[3]ಪ ಪೊಲನ್- ಉಱಿವೆ[4] ಸೀಂ ಕೆಡೆನುಡಿವೈ !

ಎಂದು ಕರ್ಣನನ್ನು ಮೂದಲಿಸಿ, ಅವನ ಕುಲವನ್ನು ಎತ್ತಿ ಆಡಿಬಿಟ್ಟನು. ಈಗ ಕರ್ಣನ ರೋಷವನ್ನು ಕೇಳಬೇಕೆ? ಕುಲ, ಕುಲ ಎಂದು ಮಾತೆತ್ತಿದ್ದಕ್ಕೆಲ್ಲಾ ತನ್ನ ಸೂತಕುಲವನ್ನು ಅಲ್ಲಗಳೆಯುವ ಇವರ ವರ್ತನೆಯನ್ನು ಅವನು ಎಷ್ಟೆಂದು ಸಹಿಸಿಯಾನು :

ಕುಲಮನೆ ಮುನ್ನಂ- ಉಗ್ಗಡಿಪಿರೇಂ ಗಳ ! ನಿಮ್ಮ ಕುಲಂಗಳಿಂತು ಮಾ-
ರ್ಮಲೆವರನ್-[5] ಅಟ್ಟಿ ತಿಂಬುವೆ?—ಕುಲಂ ಕುಲಮಲ್ತು. ಚಲಂ ಕುಲಂ, ಗುಣಂ
ಕುಲಂ-, ಅಭಿಮಾನವೊಂದೆ ಕುಲಂ-, ಅಣ್ಮೆ[6] ಕುಲಂ ! ಬಗೆವಾಗಳ್- ಈಗಳೀ-

[1] ಕೆಮ್ಮಗೆ—ಸುಮ್ಮನೆ ; [2] ಪಗೆವಾಡಿಯೊಳ್—ಶತ್ರುಗಳ ಪಾಳೆಯದವರಿಂದ. [3] ತುಬ್ಬು—ಸೂಚಿಸು ; [4] ಉಱಿವೆ — ಲಕ್ಷ್ಯಮಾಡದೆ. [5] ಮಾರ್ಮಲೆವರನ್—ಪ್ರತಿಭಟಿಸುವವರನ್ನು. [6] ಅಣ್ಮು—ಪೌರುಷ.

ಕಲಹದೊಳ್- ಅಣ್ಣ, ನಿಮ್ಮ ಕುಲಂ- ಆಕುಲಮಂ ನಿಮಗುಂಟು-
ಮಾಡುಗುಂ !

ಹೀಗೆಂದು ಪೌರುಷಮಂತ್ರವನ್ನು ಉದ್ಘೋಷಿಸಿ, ಇವರು ಎಬ್ಬಿಸಿದ್ದ ಕುಲದ ಭೂತವನ್ನು ಅಣಗಿಸಿದನು; ನಿಜವಾದ ಕುಲ ಯಾವುದೆಂದು ಸಾರಿದನು. ತನಗೆ ಉಂಟಾದ ಅಪಮಾನದ ಆವೇಶದಲ್ಲಿ,

ಗಂಗಾಸುತಂ ಪೃಥಾಸುತ-
ರಂ ಗೆಲ್ದೊಡೆ ತಪಕೆ ಪೋಪೆನ್- ; ಅವರ್ಗಳ ಕಯ್ಯೊಳ್
ಗಾಂಗೇಯನಳಿದೊಡೆ- , ಅಹಿತರನ್-
ಆಂ ಗೆಲೆ ತಳ್ತು- ಇರಿವೆನ್-. ಅನ್ನೆಗಂ ಬಿಲ್ವಿಡಿಯೆಂ !

ಎಂದು ಹಿಂದುಮುಂದು ನೋಡದೆ ಪ್ರತಿಜ್ಞೆ ಮಾಡಿಬಿಟ್ಟನು.

ಇಷ್ಟೆಲ್ಲ ನಡೆದರೂ ಭೀಷ್ಮನು ಎಲ್ಲವನ್ನೂ ಸುಮ್ಮನೆ ನೋಡುತ್ತಾ ಅಚಲಿತನಾಗಿ ಕುಳಿತಿದ್ದನು. ಕರ್ಣನು ಪಂಥವನ್ನು ಹೂಡಿದ ಮೇಲೆ ತನ್ನ ಮಾತಿಗೆ ಅವಕಾಶವುಂಟಾಯಿತು. ಕರ್ಣನ ಘೋಷಣೆಗೆ ಭೀಷ್ಮನು ಏನು ಉತ್ತರ ಕೊಡಬಹುದೆಂದು ನಿರೀಕ್ಷಿಸುತ್ತಿರುತ್ತೇವೆ. ಇದು ಆ ಉತ್ತರ :

ಕಲಿತನದುರ್ಕು, ಜವ್ವನದ ಸೊರ್ಕು, ನಿಜೇಶನ ನಚ್ಚು, ಮಿಕ್ಕ ತೋ-
ಳ್ವಲದ ಪೊಡರ್ಪು—ಕರ್ಣ, ನಿನಗುಳ್ಳನಿತೇನೆನಗುಂಟೆ ?—ಭಾರತಂ
ಕಲಹಂ- ಇದಿರ್ಚುವಂ ಹರಿಗನ್- ಅಪ್ಪೊಡೆ, ಮೊಕ್ಕಳಮೇಕೆ ನೀಂ ಪಳಂ-
ಚಲೆದಪೆಯಣ್ಣ? ಸೂಟ್ಟಡೆಯುಲಪ್ಪುದು ಕಾಣ ಮಹಾಜಿರಂಗದೊಳ್.

ಇದರಲ್ಲಿ ಒಂದೊಂದೂ ಆರಿಸಿ ತೂಕಮಾಡಿ ಪ್ರಯೋಗಿಸಿದ ಮಾತು; ಒಂದೊಂದೂ ಕರ್ಣನ ಅಹಂಕಾರಕ್ಕೆ ಕೊಡತಿಯ ಪೆಟ್ಟಿನಂತೆ ಬೀಳುತ್ತದೆ. ಮುಂದಿರುವುದು ಭಾರತಯುದ್ಧ; ಎದುರಿಸಿ ನಿಲ್ಲುವವನು ಅರ್ಜುನ! ಈಗಿನಿಂದಲೇ ಏತಕ್ಕೆ ಇಷ್ಟೊಂದು ಎದ್ದೆದ್ದು ಹಾರಾಡುತ್ತೀಯಪ್ಪಾ? ಈ ಮಹಾ ಸಂಗ್ರಾಮದಲ್ಲಿ ನಿನ್ನ ಸರದಿಯೂ ಬರುತ್ತದೆ ಕಾಣಯ್ಯ, ಆತುರ

ಪಡಬೇಡ-ಎಂದು ಭೀಷ್ಮನು ಕರ್ಣನಿಗೆ ಭರವಸೆ ಕೊಡುತ್ತಾನೆ. 'ಸೂಟ್-ಪಡೆಯಲಪ್ಪುದು ಕಾಣ' ಎಂಬ ಮಾತಿನಲ್ಲಿ ಎಷ್ಟು ಅರ್ಥ ತುಂಬಿದೆ! ಈ ಸಮರದಲ್ಲಿ, ಕುರುಪಕ್ಷದ ನಾಯಕರಿಗೆಲ್ಲ ಕಾದಾಡುವ ಸರದಿ ದೊರೆಯುತ್ತದೆಯೇ ಹೊರತು ವಿಜಯ ದೊರೆಯುವ ಸಂಭವವಿಲ್ಲ. ಭೀಷ್ಮನ ಸರದಿ ಬಂದಿದೆ, ಮತ್ತೊಬ್ಬನ ಸರದಿ ಬರುತ್ತದೆ, ಕರ್ಣನದೂ ಬರುತ್ತದೆ; ಆದರೆ ಕರ್ಣನು ನಿರೀಕ್ಷಿಸಿರುವಂತೆ ಅಲ್ಲಿಗೇ ನಿಲ್ಲದೆ ಯುದ್ಧ ಮುಂದಕ್ಕೂ ಸಾಗುತ್ತದೆ!

ಭೀಷ್ಮನು ಇಷ್ಟನ್ನು ಆಡಿದ ಬಳಿಕ, ಮುದುಕನಾದ ತಾನು ಏನು ಮಾಡಬಲ್ಲೆನೆಂಬುದಕ್ಕೆ ಪೀಠಿಕೆ ಹಾಕುತ್ತಾನೆ:

ಮುದುಪರ ಬಿಲ್ಬಲ್ಮೆಯುಂ- ಇದು-
ವದಟುಂ ಬಗೆವಾಗಳ್- ಅಣ್ಣನೆಂದಂತುಟೆ: ತ-
ಪ್ಪದು; ಕರಮೆ ತುಚ್ಚಮುಕ್ಕುಂ
ಕದನದೊಳ್!—ಇನ್ನೆನ್ನ ನುಡಿದ ನುಡಿಯಂ ಕೇಳಿಂ:

ಪಿಡಿಯೆಂ ಚಕ್ರಮನೆಂಬ ಚಕ್ರಿಯನ್[1]- ಇಳಾಚಕ್ರಂ ಭಯಗೊಳ್ವಿನಂ
ಪಿಡಿಯಿಪ್ಪೆಂ ಕರಚಕ್ರಮಂ; ನರರಥಂ ತೂಳ್ದು[2]- ಆ ಕುರುಕ್ಷೇತ್ರದಿಂ
ಪಡುವೆಣ್ಗಾವುದು[3] ಪೋಗೆ ಪೋ ಗಡ! ಇಸುವೆಂ; ನಿಚ್ಚಂ ಧರಾಧೀಶರಂ
ಪಡಲಿಟ್ಟಂತಿರೆ ಮಾಳ್ಪೆನ್-ಓವದೆ[4] ಪಯಿಂಛಾಸಿರ್ವರಂ[5] ಯುದ್ಧದೊಳ್.

—ಮುದುಕರ ಶಕ್ತಿಯೆಲ್ಲ ಕರ್ಣನು ಹೇಳಿದಷ್ಟೇ; ಆದರ ಕೈಯಲ್ಲಿ ಏನಾದೀತು—ಎಂದು ಭೀಷ್ಮನು ಮೊದಲು ಒಪ್ಪಿಕೊಂಡು, ಬಳಿಕ ಕೈಕೊಳ್ಳುವ ಅಸಾಧಾರಣ ಪ್ರತಿಜ್ಞೆಯನ್ನು ನೋಡಿ. ಕರ್ಣನ ಪ್ರತಿಜ್ಞೆಗೂ ಅದಕ್ಕೂ ಎಷ್ಟು ಅಂತರ! ಮಾತು

---

[1] ಚಕ್ರಿಯನ್—ಕೃಷ್ಣನನ್ನು; [2] ತೂಳ್ದು—ಹಿಮ್ಮೆಟ್ಟಿ; [3] ಪಡುವೆಣ್ಗಾವುದು—ಪಶ್ಚಿಮಕ್ಕೆ ಎಂಟುಗಾವುದ ದೂರ; [4] ಓವದೆ—ನಿಷ್ಕರುಣವಾಗಿ; [5] ಪಯಿಂಛಾಸಿರ್ವರಂ—ಹತ್ತುಸಾವಿರ ಮಂದಿಯನ್ನು.

ಕೊಟ್ಟದ್ದೇ ಅಲ್ಲವೆ, ತಾನು ಸೇನಾಪತಿಯಾಗಿದ್ದ ಹತ್ತು ದಿನದೊಳಗೆ ಅಷ್ಟನ್ನೂ ಭೀಷ್ಮನು ಸಾಧಿಸಿದನು !

ಮೇಲಿನ ದೃಶ್ಯದಲ್ಲಿ ಭೀಷ್ಮ-ಕರ್ಣ ಪ್ರಸಂಗದ ಒಂದು ಮುಖವನ್ನು ಮಾತ್ರ ನೋಡಿದೆವು; ಇದರ ಇನ್ನೊಂದು ಮುಖದ ಪರಿಚಯವನ್ನು ಮಾಡಿಕೊಂಡ ಹೊರತು ಪಂಪನು ರಚಿಸಿರುವ ಚಿತ್ರದ ಸ್ವಾರಸ್ಯ ಪೂರ್ಣವಾಗುವುದಿಲ್ಲ.

ಸೇನಾಧಿಪತ್ಯಕ್ಕಾಗಿ ಕರ್ಣನು ಭೀಷ್ಮನೊಡನೆ ಇಷ್ಟೊಂದು ಹುರುಡಿಸಿದನಷ್ಟೆ. ಅವನು ಶರಶಯ್ಯೆಯನ್ನು ಹಿಡಿದಮೇಲೆ, ಕರ್ಣನು ತನಗೆ ವೀರಪಟ್ಟ ಕಟ್ಟಲು ಬಂದ ದುರ್ಯೋಧನನನ್ನು ತಡೆದು ಆ ಗೌರವ ದ್ರೋಣನಿಗೆ ಸಲ್ಲುವಂತೆ ಮಾಡುತ್ತಾನೆ. ತೊರೆದಿದ್ದ ಬಿಲ್ಲನ್ನು ಮತ್ತೆ ಹಿಡಿದು, ದ್ರೋಣನ ಕೈಕೆಳಗೆ ಪರಾಕ್ರಮದಿಂದ ಕಾದುತ್ತಾನೆ. ಅವನೂ ಬಿದ್ದಮೇಲೆ ತನ್ನ ಸರದಿಯೇ ಬಂದಿತು. ಮೊದಲದಿನ ಬೆಳಗ್ಗೆ ಯುದ್ಧಕ್ಕೆ ಹೊರಡುವ ಮೊದಲು ಕರ್ಣನು—

ಪಸುರ್ಪೊನ್ನ ರಥಮನೇಱಿ, ಮುನ್ನೊರ್ವನೆ ಶರಶಯನದೊಳಿರ್ದ ಗಾಂಗೇಯನಲ್ಲಿಗೆ ಬಂದು ರಥಮಿೞಿದು, ಮೂಱುಸೂೞ್ ಬಲವಂದು, ತದೀಯ ಪಾದಪದ್ಮಂಗಳಂ ತಲೆಯೊಳಿಟ್ಟುಕೊಂಡು —

ಆಂ ಮಾತಱಿಯದೆ ಮುಳಿದುಂ
ನಿಮ್ಮಡಿಯಂ ನೋಯೆ ನುಡಿದೆನ್. ಉಱಿದೆ- ಏಳಿಸಲ್[1]- ಏನ್-
ಎಮ್ಮಳವೆ? ಮಱೆವುದಾ ಮುನ-
ದುಮ್ಮಚ್ಚ[2]ಮನ್- ಅಜ್ಜ. ನಿಮ್ಮನೆರೆ[3]ಯಲೆ ಬಂದೆಂ.
ಧುರದೊಳ್ ನಿಮ್ಮಡಿಯುಂ ಗೆಲಲ್-
ಅರಿಯ[ರನ್- ಆ] ಪಾಂಡುಸುತರನ್- ಎಮ್ಮಂದಿಗರ್- ಅ-
ಚ್ಚರಿಯಲ್ತೆ ಗೆಲ್ವರೆಂಬುದು.
ಹರಿಗನೊಳಿಱಿದು- ಎಂತುಮೆನ್ನ ಚಲಮನೆ ಮೆಱೆವೆಂ.

---

[1] ಏಳಿಸು—ಅಲ್ಲಗಳೆ ; [2] ಉಮ್ಮಚ್ಚ —ಕ್ರೋಧ ; [3] ಎರೆ—ಬೇಡು.

—ಹೀಗೆಂದು ಭೀಷ್ಮನಿಗೆ ಕರ್ಣನು ಅರಿಕೆಮಾಡುತ್ತಾನೆ. ಅವನ ಹಿಂದಿನ ಅಹಂಕಾರವೆಲ್ಲಿ, ಇಂದಿನ ವಿನಯವೆಲ್ಲಿ! ಭೀಷ್ಮರಿಗೇ ಗೆಲ್ಲಲು ಅಸಾಧ್ಯರಾದ ಪಾಂಡವರನ್ನು ತನ್ನಂಥವರು ಗೆಲ್ಲುವುದು ಎಂದಿಗಾದರೂ ಸಾಧ್ಯವೇ ? ಈಗ ತಾನು ಕಾದುವುದು ಗೆಲವಿಗಲ್ಲ, ಛಲಕ್ಕಾಗಿ. ಕರ್ಣನ ಈ ಹೃದಯಪರಿವರ್ತನೆ ಭೀಷ್ಮನ ಹೃದಯವನ್ನೂ ಕರಗಿಸಿತು. ಕರ್ಣನ ಬಿನ್ನಹದಲ್ಲಿರುವ ಉನ್ನತಗುಣವೇ ಭೀಷ್ಮನ ಉತ್ತರದಲ್ಲೂ ಕಾಣಬರುತ್ತದೆ :

ನುಡಿವುದಂ ಪತಿಭಕ್ತಿಯು ಪೆಂಪಿಂ ನೀಂ ನುಡಿವೈ ; ಪೆಱಿಂದದಿಂ
ನುಡಿವೆಯಲ್ತೆ. ಮದಾಯುಂ[1]- ಅಮೋಘಂ ; ಸಃಟ್ವಡೆಯಲ್ಕೆ-
ಎನಗಕ್ಕುಂ- ಇ-
ನ್ನೆಡೆಯೊಳ್- ಎಂ [ದಯ್-]. ಆದೆಂದುದದೇಂ ತಪ್ಪಾದುದೆ?
ನಮ್ಮೊವಜರ್[2] ಜಸಂ-
ಬಡೆದ ಭಾರ್ಗವರಪ್ಪುದಱಿಂದಂ ನಂಟರುಂ- ಅಂಗಮಹೀಪತೀ.

ಹಿಂದೆ ಕರ್ಣನು ಆಡಿದ್ದ ಕಟುವಾಕ್ಯಗಳಲ್ಲಿ ಈರ್ಷ್ಯೆಯೂ ಸೇರಿತ್ತೆಂಬುದನ್ನು ಭೀಷ್ಮನು ಈಗ ಮರೆತನು ; ಅದರಲ್ಲೆಲ್ಲಾ ಸ್ವಾಮಿಭಕ್ತಿಯ ಉತ್ಕರ್ಷವನ್ನೇ ಕಂಡು ಕರ್ಣನ ಬೆನ್ನು ತಟ್ಟಿದನು. ತನ್ನ ಶೌರ್ಯವನ್ನು ತೋರಲು ಅವಕಾಶ ಬೇಗ ದೊರೆಯಬೇಕು ಎಂದು ಕರ್ಣನಂಥ ವೀರನು ಉತ್ಸಾಹದಿಂದ ಮುಂದುವರಿದರೆ ತಪ್ಪೇನು ?—ಇದೆಲ್ಲದರ ಜೊತೆಗೆ ತನಗೂ ಕರ್ಣನಿಗೂ ಇದ್ದ ಒಂದು ಬಾಂಧವ್ಯವೂ ನೆನಪಾಯಿತು. ಪ್ರಖ್ಯಾತರಾದ ಪರಶುರಾಮರೇ ತಮ್ಮಿಬ್ಬರಿಗೂ ಧನುರ್ವಿದ್ಯೆಯನ್ನು ಕಲಿಸಿದ ಗುರುಗಳು ; ಆದಕಾರಣ, " ನಾವಿಬ್ಬರೂ ಬಂಧುಗಳೂ ಹೌದು, ಕರ್ಣ ! " ಎಂದು ಭೀಷ್ಮನು ಔದಾರ್ಯದಿಂದ ಹೇಳುತ್ತಾನೆ. ಅಷ್ಟೇ ಅಲ್ಲ. ಕರ್ಣನು ಸೂತಪುತ್ರನೆಂದೇ ತನ್ನ ನಂಬಿಕೆ

[1] ಮದಾಯುಂ —ನನ್ನ ಶೌರ್ಯ ; [2] ಒವಜರ್ —ಉಪಾಧ್ಯಾಯರು.

ಯಾಗಿದ್ದರೂ, 'ನೀನೆಮಗೆ ಕುಂತಿಯ ಗಾಂಧಾರಿಯ ಮಕ್ಕಳ್ ಲೆಕ್ಕದೆ ಮೊಮ್ಮನೈ' ಎಂದು ವಾತ್ಸಲ್ಯದ ಮಾತನ್ನಾಡಿ ಕರ್ಣನ ಮನಃಖೇದವನ್ನೆಲ್ಲಾ ತೊಳೆಯುತ್ತಾನೆ. (ಈ ಮಾತು ದಿಟವೂ ಹೌದೆಂದು ಪಂಪಭಾರತದ ಭೀಷ್ಮನಿಗೆ ತಿಳಿಯದು.) ಕೊನೆಗೆ—

ನಿನ್ನನೆ ನಚ್ಚಿದಂ ಕುರುಮಹೀಪತಿ ; ನಿನ್ನ ಶರಾಳಿಗಳ್ಗೆ ಮು-
ನ್ನಂ ನಡುಗುತ್ತುಮಿರ್ಪುದು- ಅರಿಸಾಧನಸಂಪದಂ-. ಅಂತೆ ಶಸ್ತ್ರಸಂ-
ಪನ್ನನೆ ಆಗಿ, ಶಲ್ಯನನೆ ಸಾರಥಿಯಾಗಿರೆ ಮಾಡಿ ಕಾದು ನೀಂ
ನಿನ್ನಯ ಬಲ್ಲ ಮಾಳ್ಕೆಯೊಳ್-. ಇದಂ ನುಡಿದೆಂ ನಿನಗಂಗವಲ್ಲಭಾ.

ಎಂದು ಭೀಷ್ಮನು ಕರ್ಣನನ್ನು ಹೊಗಳಿ, ಉಚಿತವಾದ ಸಲಹೆಯನ್ನು ಕೊಟ್ಟು ಪ್ರೋತ್ಸಾಹಿಸುತ್ತಾನೆ. "ಶಲ್ಯನಂಥ 'ನೆಗಳ್ದ ಕುಲದ ಚಲದ- ಒಳ್ಪಿನ ಭೂಪ'ನನ್ನು ನನಗೆ ತೇರು ನಡಸೆಂದು ಸೊಕ್ಕಿನಿಂದ ಕೇಳುವುದೆ? ಕುಲಹೀನನೆಂಬ ಅಪವಾದ ಈಗಾಗಲೇ ನನಗೆ ಬಂದಿಲ್ಲವೆ! ಸಾವುಗೆಲವುಗಳನ್ನು ಲೆಕ್ಕಿಸದೆ, ನನ್ನ ಪೌರುಷದಿಂದ ನಿಮ್ಮನ್ನು ಮೆಚ್ಚಿಸುತ್ತೇನೆ" ಎಂದು ಕರ್ಣನು ಹೇಳಲು, ಆ ನುಡಿಯಂತೂ ಭೀಷ್ಮನ ಮನಸ್ಸನ್ನು ಸೆರೆಹಿಡಿಯುತ್ತದೆ. ಅವನು ತನ್ನ ಮೊದಲ ಸಲಹೆಯನ್ನೇ ಕರ್ಣನಿಗೆ ಮತ್ತೆ ಒತ್ತಿ ಹೇಳಿ ಅವನನ್ನು ಹರಸಿ ಕಳುಹಿಸಿಕೊಡುತ್ತಾನೆ.

ಮುಂದಿನ ಕಥೆಯನ್ನು ಬೆಳಸಲು ಮನಸ್ಸಿದ್ದರೂ ಇಲ್ಲಿ ಅವಕಾಶವಿಲ್ಲ. ಅರ್ಜುನನೊಂದಿಗೆ ನಡೆದ ಕೊನೆಯ ಕಾಳಗದಲ್ಲಿ ಕರ್ಣನ ತೇಜಸ್ಸು ಪ್ರಜ್ವಲಿಸಿತು :

ಬೆಳಗುವ ಸೊಡರ್ಗಳ ಬೆಳಗ-
ಗ್ಗಳಿಸುವ ವೋಲ್ ಪೋಪ ಪೊೞ್ತುಱೊಳ್, ತೇಜಂ ಪ-
ಜ್ಜಳಿಸೆ ತಳತಳಿಸಿ ತೊಳತೊಳ-
ತೊಳಗಿದನ್- ಅಸ್ತಮಯಸಮಯದೊಳ್ ದಿನಪಸುತಂ !

ಆರುವ ಹೊತ್ತಿನಲ್ಲಿ ದೀಪದ ಕುಡಿ ಮತ್ತಷ್ಟು ಉರಿದೇಳುವ ಹಾಗೆ, ಸೂರ್ಯಪುತ್ರನು ತನ್ನ ಅಸ್ತಮಯಕಾಲದಲ್ಲಿ ತೇಜಸ್ಸಿನಿಂದ ತೊಳಗಿದನಂತೆ!—ಇಲ್ಲಿ ಕರ್ಣನಿಗೆ ಉರಿಯುವ ದೀಪದ ಹೋಲಿಕೆಯನ್ನು ಕೊಟ್ಟಿರುವುದೂ, ಅವನನ್ನು ದಿನಪಸುತನೆಂದು ಕರೆದಿರುವುದೂ ಪಂಪನ ಪ್ರತಿಭೆಗೆ ಉಜ್ಜ್ವಲವಾದ ಸಾಕ್ಷಿ.

ಕುರುಕ್ಷೇತ್ರವೊಂದು ಮಹಾಶ್ಮಶಾನ. ಅಲ್ಲಿ ಕಾದಿದ ಮಹಾವೀರರ ಕೊನೆಯ ಸಾಹಸವನ್ನು ವರ್ಣಿಸಿ ಅವರು ಬಿದ್ದ ಜಾಗದಲ್ಲಿ ವೀರಗಲ್ಲನ್ನು ಒಂದೆರಡು ಪದ್ಯಗಳಲ್ಲಿ ಕಡೆದು ನಿಲ್ಲಿಸುವುದು ಪಂಪನ ಪದ್ಧತಿ. ಪಂಪಭಾರತದ ಉದ್ದಕ್ಕೂ ಚರಮ ಶ್ಲೋಕಗಳು ತುಂಬಿವೆ. ಇವುಗಳಲ್ಲೆಲ್ಲಾ, ಕರ್ಣನ ಮೇಲಿನ ಅವನ ಪದ್ಯ ಅದ್ವಿತೀಯವಾಗಿದೆಯೆಂದು ಎಲ್ಲ ಸಹೃದಯರ ನಿರ್ಣಯ. ಅದನ್ನು ರಚಿಸುವಾಗ, ಕರ್ಣನ ಶೌರ್ಯ ಸತ್ಯ ಸತ್ತ್ವ ತ್ಯಾಗಗಳ ಚಿತ್ರವೇ ಪಂಪನ ಕಣ್ಣಮುಂದೆ ಕಟ್ಟಿರಬೇಕು. ಈ ವೇಳೆಯಲ್ಲಿ ಕವಿಯ ಹೃದಯವನ್ನೆಲ್ಲಾ ಕರ್ಣನೊಬ್ಬನೇ ತುಂಬಿದ್ದನು. ಭಾರತಕಥೆಯ ಮಿಕ್ಕ ಪಾತ್ರಗಳ ಮಾತಿರಲಿ; ಕಾವ್ಯನಾಯಕನಾದ ಅರ್ಜುನ-ಅರಿಕೇಸರಿಯನ್ನೇ ಒಂದು ಕ್ಷಣದ ಮಟ್ಟಿಗೆ ಅಲ್ಲಿಂದ ಹೊರದೂಡಿದ್ದನು. ಹಾಗೆ ಕರ್ಣನ ಮಹಿಮೆ ಪಂಪನ ಮನಸ್ಸನ್ನು ಸೂರೆಗೊಳ್ಳದಿದ್ದರೆ, ಅವನು 'ವಿಕ್ರಮಾರ್ಜುನವಿಜಯ'ದಲ್ಲಿ ಹೀಗೆ ಬರೆಯುತ್ತಿದ್ದನೆ?—

**ನೆನೆಯದಿರಣ್ಣ ಭಾರತದೊಳ್- ಇನ್ ಪೆಱರಾರುಮನ್-. ಒಂದೆ ಚಿತ್ತದಿಂ**
**ನೆನೆವೊಡೆ ಕರ್ಣನಂ ನೆನೆಯ: ಕರ್ಣನೊಳ್- ಆರ್ ದೊರೆ!— ಕರ್ಣ-**
**ನೇಱು, ಕ-**
**ರ್ಣನ ಕಡುನನ್ನಿ, ಕರ್ಣನಳವು-, ಅಂಕದ ಕರ್ಣನ ಚಾಗಮೊಂದು ಕ-**
**ರ್ಣನ ಪಡೆಮಾತಿನೊಳ್ ಪುದಿದು ಕರ್ಣರಸಾಯನಮಲ್ತೆ ಭಾರತಂ !**

---

# ೪. ಕವಿತೆಯ ರೀತಿ

ಆದಿಪುರಾಣ ವಿಕ್ರಮಾರ್ಜುನವಿಜಯಗಳ ತಳಕಟ್ಟನ್ನು ನೋಡಿ ಅಲ್ಲಿ ಬರುವ ಮಹಾವ್ಯಕ್ತಿಗಳೊಬ್ಬಿಬ್ಬರ ಗುರುತು ಮಾಡಿಕೊಂಡಮಾತ್ರಕ್ಕೆ ಕವಿತಾಗುಣಾರ್ಣವನ ಆಳವನ್ನು ಶೋಧಿಸಿದಂತೆ ಆಗಲಿಲ್ಲ; ಆ ಹೆಬ್ಬಯಕೆಯೂ ಇಲ್ಲಿ ನಮಗಿಲ್ಲ. ಈ ವಿಸ್ತಾರವಾದ ಚಂಪೂಕಾವ್ಯಗಳಲ್ಲಿ ಮುಖ್ಯಕಥೆಗೂ ಉಪ ಸಂದರ್ಭಗಳಿಗೂ ಪುಷ್ಟಿಕೊಡುವ ವರ್ಣನೆಯಿದೆ, ವಾಕ್ಚಿತ್ರವಿದೆ; ಇದಕ್ಕೆ ಆಧಾರವಾಗಿ ಪಂಪನ ಲೋಕಾನುಭವವಿದೆ; ಈ ಅನು ಭವಕ್ಕೆ ರೂಪುಗೊಟ್ಟಿರುವ ಪ್ರತಿಭೆಯಿದೆ. ಇದೆಲ್ಲ ಇದೆಯೆಂ ಬುದಕ್ಕಾದರೂ ಒಂದೆರಡು ನಿದರ್ಶನಗಳನ್ನು ಕೊಟ್ಟು ಪಂಪನ ಕವಿತೆಯ ರೀತಿಯನ್ನು ಸೂಚಿಸಿದಲ್ಲದೆ ಈ ಪುಟ್ಟ ಪುಸ್ತಕವೂ ಪೂರ್ಣವಾಗುವುದಿಲ್ಲ.

ತನ್ನ ಕೃತಿಗಳೆರಡರಲ್ಲಿ ಪಂಪನಿಗೆ ಯಾವುದರ ಮೇಲೆ ಹೆಚ್ಚು ಮಮತೆಯಿತ್ತೋ ಹೇಳುವುದು ಕಷ್ಟ; ಆದರೆ ವಾಚಕ ರಿಗೆ ಯಾವುದು ಹೆಚ್ಚು ಪ್ರಿಯವೆಂಬುದನ್ನು ಹೇಳುವುದು ಕಷ್ಟ ವಲ್ಲ. ಆದಿಪುರಾಣವನ್ನು ಬರೆದು ಪಂಪನು 'ಪುರಾಣಕವಿ' ಯೆಂಬ ಪ್ರಶಸ್ತಿಯನ್ನು ಪಡೆದನು; ರನ್ನನು ಈ ಕಾವ್ಯವನ್ನು 'ಉಪಮಾತೀತ' ವೆಂದು ಹೊಗಳಿದನು. ಇದರ ಕಥೆಯಲ್ಲಿ ಉತ್ತಮವಾದ ದೃಷ್ಟಿಯಿದೆ, ಮಾತಿನಲ್ಲಿ ಇಂಪೂ ಗಾಂಭೀರ್ಯವೂ ಇವೆ. ಆದರೆ, ಸನ್ನಿವೇಶಗಳ ಸ್ವಾರಸ್ಯವೂ ಜೀವ ತುಂಬಿ ಮೆರೆಯುವ ಬಗೆಬಗೆಯ ಮಹಾವ್ಯಕ್ತಿಗಳ ಸಮ್ಮಿಳನವೂ ಕಿರುನುಡಿಯಲ್ಲಿ ಹೇರಳವಾದ ಅರ್ಥವನ್ನು ಅಡಗಿಸುವ ಜಾಣ್ಮೆಯೂ ಪಂಪಭಾರತದಲ್ಲಿರುವಷ್ಟು ಆದಿಪುರಾಣದಲ್ಲಿ ಇಲ್ಲ ವೆಂದು ರಸಜ್ಞರು ಒಪ್ಪಿಕೊಳ್ಳಲೇ ಬೇಕು. ಇದರ ಮೇಲೆ ಆದಿಪುರಾಣದ ಶೈಲಿಯಲ್ಲಿ—ಮುಖ್ಯವಾಗಿ ಅದರ ಗದ್ಯಭಾಗ

ದಲ್ಲಿ—ಪಾಂಡಿತ್ಯದ ಸೆಡೆತ ಹೆಚ್ಚು; ಸಂಸ್ಕೃತದ ಗದ್ಯ ಕಾವ್ಯಗಳ ಮಾದರಿಯಿಂದ ಮೋಸಹೋಗಿ ಪಂಪನು ಇಲ್ಲಿ ಮಾರುದ್ದದ ಸಮಾಸಗಳನ್ನು ಹೆಣೆಯುತ್ತಾನೆ. ವಿಕ್ರಮಾರ್ಜುನ ವಿಜಯವನ್ನು ಬರೆಯುವ ವೇಳೆಗೆ ಅವನಲ್ಲಿ ಸಂಸ್ಕೃತ ಪಾಂಡಿತ್ಯದ ಸೊಕ್ಕು ಇಳಿದಿತ್ತು. ತಿರುಳುಗನ್ನಡದ ಇಂಪೂ ಹುರುಳೂ ಅದರ ನುಡಿಗಟ್ಟಿನ ಹದವೂ ಅವನಿಗೆ ವಶವಾಗಿದ್ದುವು. ಬಹುಶಃ, ಅವನ ಲೋಕಾನುಭವವೂ ಹೆಚ್ಚು ಪರಿಪಾಕ ಗೊಂಡಿತ್ತು. ಈ ಎಲ್ಲ ಕಾರಣಗಳಿಂದ, ಇಲ್ಲಿ ಕೊಡುವ ಉದಾಹರಣೆಗಳನ್ನು ಮುಖ್ಯವಾಗಿ ವಿಕ್ರಮಾರ್ಜುನವಿಜಯದಿಂದಲೇ ಆರಿಸಿಕೊಳ್ಳಲಾಗಿದೆ.

ವರ್ಣನೆ ಹೃದ್ಯವಾಗಬೇಕಾದರೆ, ಕವಿ ಸೂಕ್ಷ್ಮವಾಗಿ ಅವಲೋಕಿಸಿರಬೇಕು. ಯುದ್ಧವರ್ಣನೆಯಲ್ಲಿ ಪಂಪನಿಗೆ ಈ ಅನುಕೂಲವಿತ್ತು. ಅವನು ಸ್ವಯಂ ಶೂರನಾಗಿದ್ದನು; ರಣ ರಂಗದಲ್ಲಿ ಓಡಾಡಿ ಅಲ್ಲಿಯ ಸನ್ನಿವೇಶಗಳನ್ನು ಅರಿತಿದ್ದನು. ಆದಕಾರಣ ಕವಿಸಮಯವೊಂದನ್ನೇ ನೆಚ್ಚದೆ ತಾನು ಕಂಡ ವಿಷಯಗಳನ್ನೂ ಅವನು ಉಪಯೋಗಿಸಿಕೊಳ್ಳಲು ಅವಕಾಶ ವಿತ್ತು. ಉದಾಹರಣೆಗೆ, ದಿನದ ಯುದ್ಧ ಮುಗಿದ ಮೇಲೆ ಸೇನಾನಾಯಕರು ಏನೇನು ಮಾಡುತ್ತಿದ್ದರೆಂಬ ಅಂಶವನ್ನು ಪಂಪನು ಸ್ವಾಭಾವಿಕವಾಗಿ, ಸುಂದರವಾಗಿ ನಿರೂಪಿಸಿದ್ದಾನೆ. ತನ್ನ ಅನುಭವವನ್ನೇ ಅವನು ಇಲ್ಲಿ ಅನುವಾದಮಾಡುತ್ತಿರು ವಂತಿದೆ :

ಇತ್ತಲೆರಡುಂ ಪಡೆಯ ನಾಯಕರ್—ಅಟಿಯೆ ನೊಂದ ತಮ್ಮ ಅಣುಗಾಳ್ಗಳ ಕೊಂಡಾಟವಾನೆಗಳ ನಚ್ಚಿನ ಕುದುರೆಗಳ ಪುಣ್ಗಳನ್ ಉಡಿಯಲುಂ ಓವಲುಂ ಮದ್ದುರ್ಬೆಜ್ಜರನಟ್ಟುತ್ತುಂ, ಇಕ್ಕಿದ ಸನ್ನಣಂಗಳಂ ಗೆಲ್ದು ಕಣಕೆನೆ ಪೋಗುರ್ಚಿ, ತಮ್ಮ ಮೆಯ್ಯೊಳ್ ಉಡಿಪ-

ಅಂಬುಗಳುಮನ್- ಎಲ್ವಂ ನಟ್ಟು- ಉಡಿದ ಬಾಳ ಕಕ್ಕಡೆಯು- ಉಡಿಗಳುಮನ್- ಅಯಸ್ಕಾಂತಮುಂ ತೋಱಿ ತೆಗೆಯಿಸುತ್ತುಂ, ವಜ್ರಮುಷ್ಟಿಯ ಪೊಯ್ಲೊಳಂ ಬಾಳ್ಗಳ ಕೋೞೊಳಂ- ಉಚ್ಚಳಿಸಿದ ಕಪಾಲದೋಡುಗಳಂ ಗಂಗೆಗಟ್ಟುತ್ತುಂ ;—

ಉನ್ನತಮಸ್ತಕಸ್ಥಳದೊಳ್- ಅಂಬುಗಳ್- ಅೞ್ದುಡಿದಿರ್ದೊಡೆ- ಅತ್ತಮಿ-
ತ್ತಂ ನೆರೆತಾಡು ಬಲ್ದಡಿಗರ್- ಇೞ್ಕುಱಿಸೊಳ್ ಕಿಱಿ-; ನೊಂದೆನೆನ್ನದೆ-, ಅಃ
ಎನ್ನದೆ-, ಅಣಂ ಮೊಗಂ ಮುರಿಯದೆ-, ಅಳ್ಕದೆ, ಬೇನೆಗಳೊಳ್ ಮೊಗಂಗಳಂ
ಬಿನ್ನಗೆ ಮಾಡದೆ- ಇರ್ದರ್- ಅಳವಚ್ಚರಿಯಾಗೆ ಕೆಲರ್ ಮಹಾರಥರ್ !

ರಸಮೊಸರ್ವನ್ನೆಗಂ ತಗುಳೆ ಪಾಡುವ ಗಾಣರ ಗೇಯುಂ-, ಅೞ್ಕಱಿಂ
ಪೊಸಯಿಸೆ ಸೋಂಕುವ- ಒಲ್ದೊಲಿಸುವ- ಓಪಳ ಸೋಂಕು, ಪೊದಳ್ದ ಜಾದಿಯೊಳ್
ಮಸಗಿದ ಕಂಪು, ಕಂಪನೊಳಕೊಂಡು- ಅಲೆಪೊಂದೆಲರ್- —ಎಂಬಿವು- ಅಂದು ಪಾ-
ೞಿಸುವುವು- ಉದಗ್ರ ವೀರಭಟರ- ಆಹವ ಕೇಳಿ ಪರಿಶ್ರಮಂಗಳಂ.

ಈ ಮಹಾರಥರು ತಮ್ಮ ಪ್ರೀತಿಯ ಬಂಟರಿಗೂ ಆನೆ ಕುದುರೆಗಳಿಗೂ ಉಂಟಾದ ಗಾಯಗಳಿಗೆ ಮದ್ದುಕಟ್ಟಿ ನೋಡಿಕೊಳ್ಳಲು ವೈದ್ಯರನ್ನು ಮರೆಯದೆ ಕಳುಹಿಸುತ್ತಿದ್ದುದು, ತಾವು ಧರಿಸಿದ್ದ ಲೋಹದ ಕವಚಗಳನ್ನು ಕಣಕ್ಕನೆ ಒಮ್ಮೆಗೇ ಕಳಚಿ ಬಿಡುತ್ತಿದ್ದುದು, ತಮ್ಮ ಮೈಯಲ್ಲಿ ನಾಟಿ ಮುರಿದುಕೊಂಡಿದ್ದ ಆಯುಧದ ಚೂರುಗಳನ್ನು ತೆಗೆಯಲು ಅಯಸ್ಕಾಂತವನ್ನು ಉಪಯೋಗಿಸುತ್ತಿದ್ದುದು, ಮುಷ್ಟಿಘಾತದಿಂದಲೋ ಕತ್ತಿಯೇಟಿನಿಂದಲೋ ಸಿಡಿದುಹಾರಿದ ಭಟರ ತಲೆಚಿಪ್ಪುಗಳನ್ನು ಗಂಗಾಜಲದಲ್ಲಿ ಬಿಡಲು ಕಳುಹಿಸುತ್ತಿದ್ದುದು—ಇಂಥ ಸಹಜವಾದ ವಿವರಗಳನ್ನು ಓದಿದಾಗ, ಅತ್ಯುಕ್ತಿಯ ವರ್ಣನೆಗಳಿಂದ ಬೇಸರಗೊಂಡಿದ್ದ ರುಚಿ ಮತ್ತೆ ಹದಕ್ಕೆ ಬರುತ್ತದೆ. ಇದಕ್ಕೆ ಮಿಗಿಲಾ

ದದ್ದು ಆ ಮಹಾವೀರರ ಸ್ಥೈರ್ಯದ ಚಿತ್ರ. ಯುದ್ಧದ ಆವೇಶದಲ್ಲಿ ತಮ್ಮ ನೆತ್ತಿಗೆ ಬಾಣ ನಾಟಿದ್ದನ್ನೇ ಅರಿಯದೆ ಹೋರಾಡಿದ್ದು ಅಷ್ಟು ಆಶ್ಚರ್ಯವಲ್ಲ; ಸಂಜೆಯಲ್ಲಿ ಶಿಬಿರಕ್ಕೆ ಬಂದಮೇಲೆ, ವೃಥಕಾಯರಿಬ್ಬರು ಆಕಡೆ ಈಕಡೆ ನಿಂತು ಇಕ್ಕುಳದಲ್ಲಿ ಅದನ್ನು ಕೀಳುವಾಗ, ನೋವನ್ನು ಮಾತಿನಲ್ಲಿ ತೋರಿಸದೆ, ಅಂಗಚಲನೆಯಲ್ಲಿ ತೋರಿಸದೆ, ಕಡೆಗೆ ಮುಖವನ್ನು ಸಪ್ಪಗೆ ಕೂಡ ಮಾಡಿಕೊಳ್ಳದೆ ಈ ಧೀರರು ಸಹಿಸಿಕೊಂಡದ್ದು ಹೆಚ್ಚಿನ ಆಶ್ಚರ್ಯ. ಇದರ ಜೊತೆಗೆ ಒಂದು ಸುಕುಮಾರಚಿತ್ರ: ಈ ರಣರಸಿಕರು ಜೀವನದಲ್ಲೂ ರಸಿಕರು. ಶಿಬಿರದಲ್ಲಿದ್ದಾಗ ಕೂಡ ಗಾಯನವಿಲ್ಲದೆ, ನಲ್ಲೆಯ ಪ್ರಿಯಸ್ಪರ್ಶವಿಲ್ಲದೆ, ಅವಳು ಮುಡಿದಿದ್ದ ಜಾಜಿಯ ಹೂವಿನ ಕಂಪಿಲ್ಲದೆ, ಆ ಕಂಪಿನಿಂದ ಮಗಮಗಿಸುವ ತಂಗಾಳಿಯ ಸೇವನೆಯಿಲ್ಲದೆ ಅವರ ಯುದ್ಧಶ್ರಮ ಹರಿಯದು!

ಯುದ್ಧದಂತೆಯೇ ಮನೆವಾರ್ತೆಯ ಚಿತ್ರವನ್ನೂ ಪಂಪನು ಮನಮುಟ್ಟುವ ತಿಳಿಮಾತಿನಲ್ಲಿ ಕೊಡಬಲ್ಲನು. ಆದಿಪುರಾಣದಲ್ಲಿ, ಶ್ರೀಮತಿಯ ಪರಿಣಯವಾದಮೇಲೆ, 'ಮಗಳುಮನ್-ಅಳಿಯನುಮಂ ಕಿಱಿದಂತರಂಬರಂ ಕಳಿಪಿ' ಹಿಂದಿರುಗುವಾಗ—

ಪೊಡೆವಡುವ- ಅಪ್ಪಿಕೊಳ್ವ, ನೆನೆಯುತ್ತಿರಿಮೆಂಬ, ಸಮಸ್ತವಸ್ತುವಂ
ಕುಡುವ, ಪಲರ್ಮೆಯಿಂ ಪರಸಿ ಸೇಸೆಯನಿಕ್ಕುವ, ಬುದ್ಧಿವೇೞ್ವ, ಕ-
ಯ್ಮುಡಿ ನಿಮಗೆಂದೊಡಂಬಡಿಪ, ನಲ್ಲರಗಲ್ಕೆಗೆ ಕಣ್ಣ ನೀರ್ಗಳಂ
ಮಿಡಿವ ಬಹುಪ್ರಕಾರ ಜನಸಂಕಟಮೊಪ್ಪಿದುದಾ ಪ್ರಯಾಣದೊಳ್!

ಮಗಳನ್ನು ಮೊದಲ ಸಲ ಗಂಡನ ಮನೆಗೆ ಕಳುಹಿಸುವಾಗ ಪಂಪನೂ ಈ ಕರುಳಿನ ಯಾತನೆಯನ್ನು ಕಂಡಿರಬೇಕು.

ಇದ್ದುದನ್ನು ಇದ್ದಂತೆಯೇ ವರ್ಣಿಸುವುದರ ಜೊತೆಗೆ, ಲೋಕಸ್ಥಿತಿಯ ಎಲ್ಲೆಗೆ ಬಲುದೂರ ಮೀರಿಹೋಗದೆ ವಸ್ತುಗುಣವನ್ನು ಕೆಲಮಟ್ಟಿಗೆ ಅತಿಶಯಪಡಿಸಿ ಹೇಳಿದರೆ ಕಾವ್ಯಕ್ಕೆ ತುಂಬ

ಪುಷ್ಟಿಬರುತ್ತದೆ. ಕುರುಜಾಂಗಣದೇಶದ ವರ್ಣನೆಯಲ್ಲಿ ಬರುವ ಈ ಹಿತಕರವಾದ ಅತಿಶಯೋಕ್ತಿಯನ್ನು ನೋಡಿ:

ಮಿಡಿವೊಡೆ ತನಿಗರ್ಬು ರಸಂ-
ಬಿಡುವುವು, ಬಿರಿದೊಂದು ಮಾಂಗುಳ ಕಂಪಿನೊಳೆ ಮೊಗಂ-
ಗಿಡು[1] ವುವು ತುಂಬಿಗಳ್., ಅಟ್ಕ್ಕಮೆ.
ವಡು[2] ವುವು ಕುಡಿದೊಂದು ಪಣ್ಣ ರಸದೊಳೆ ಗಿಳಿಗಳ್.

ಪಂಪನ ಕಾವ್ಯಗಳಲ್ಲಿ ಎಲ್ಲಕ್ಕೂ ಮಿಗಿಲಾಗಿ, ಮೊದಲಾಗಿ ಕಾಣುವ ಗುಣವೆಂದರೆ ಅವನ ಮಿತವಚನ. ಆಡಂಬರವಿಲ್ಲದ ಎರಡು ಮಾತಿನಲ್ಲಿ ಒಂದು ಸಮಗ್ರ ಚಿತ್ರವನ್ನೋ ಭಾವವನ್ನೋ ಅಡಕಮಾಡುವ ಸಾಮರ್ಥ್ಯ ಅವನಿಗೆ ವಿಶೇಷವಾಗಿ ಉಂಟು. ಅವನ ನುಡಿಯಲ್ಲಿ ಹೇಗೆ ಧ್ವನಿಶಕ್ತಿಯಿರುವುದರಿಂದಲೇ ಅದರ ಮಿತಿಗೆ ಬೆಲೆ ಬಂದಿರತಕ್ಕದ್ದು. ಯಾವ ಒಂದು ಸೂಕ್ಷ್ಮವಾದ ವಿವರದಿಂದ ಒಟ್ಟು ಸಂದರ್ಭದ ತಿರುಳೇ ಕೈಗೆ ಸಿಕ್ಕುತ್ತದೋ ಆ ವಿವರ ಪಂಪನ ಕಣ್ಣಿಗೆ ಅನಾಯಾಸವಾಗಿ ಬೀಳುತ್ತದೆ; ಸುಲಭವಾದ ಎರಡು ಮಾತಿನಲ್ಲಿ ರೂಪುಗೊಳ್ಳುತ್ತದೆ. ಇದಕ್ಕೆ ಅತ್ಯುತ್ಕೃಷ್ಟವಾದ ನಿದರ್ಶನವೆಂದರೆ—ತನ್ನ ಸೇನೆಯನ್ನು ಪಾಂಡವರ ಸೇನೆಗೆ ಎದುರೊಡ್ಡಿ ನಿಂತ ಭೀಷ್ಮನ ವರ್ಣನೆ:

ಆಗಳ್ ಕೌರವಬಲದ ಸೇನಾನಾಯಕಂ ಗಾಂಗೇಯನ್- ಅಡ್ಡಮಾಗೆ ತನ್ನೊಡ್ಡಿದ ಮಕರವ್ಯೂಹದ ಮೊನೆಯೊಳ್- ಸುತ್ತಿಡಿದೆತ್ತಿದ ಪೊನ್ನ ತೋಳಪ ಪಡಿಯಗೆ[3] ಗಳುಂ, ಮೆಱೆವ ಬೆಳ್ಳಿಯ ರಥಮುಂ, ಆ ರಥದೊಳ್- ಒಡಂಬಡೆ ಪೂಡಿದ ಕುದುರೆಗಳುಂ, ಜೋಲ್ದ ಪುರ್ವನೆತ್ತಿ ಕಟ್ಟಿದ ಲಲಾಟಪಟ್ಟದೊಳ್- ಇಟ್ಟಳ[4] ಮೊಪ್ಪುವ ಬೀರವಟ್ಟಮುಂ- ಅಸದಳಂ- ಎಸೆಯೆ;

[1] ಮೊಗಂಗಿಡು — ಮುಖಗೆಟ್ಟುಹೋಗು; [2] ಅಟ್ಕ್ಕಮೆವಡು — ಅಜೀರ್ಣ ಹೊಂದು. [3] ಪಡಿಯಗೆ — ಧ್ವಜ; [4] ಇಟ್ಟಳಂ — ಒತ್ತಾಗಿ.

ದಿವ್ಯಕವಚಮುಂ ತೊಟ್ಟು, 'ಪರಶುರಾಮುಂ ಬಾಳ್ಗೆ-' ಎಂದು ಪ್ರಚಂಡಕೋದಂಡಮುಂ ಕೊಂಡು, ಪಾಂಡವಬಲಮಂ ಮಾರ್ಕೊಂಡು ನಿಂದಾಗಳ್ —

ಸೇನಾಪತಿ ಪದವಿಗೆ ಗುರುತಾದ ವೀರಪಟ್ಟವನ್ನು ಭೀಷ್ಮನ ಹಣೆಗೆ ಕಟ್ಟುವಾಗ, ಕುಸಿದು ಜೋಲುಬಿದ್ದು ಕಣ್ಣಿನ ಮೇಲೆ ಮುಸುಕುತ್ತಿದ್ದ ಅವನ ಹುಬ್ಬನ್ನೂ ಎತ್ತಿ ಕಟ್ಟಿದ್ದಾರೆ! ಭೀಷ್ಮನ ಮುಪ್ಪು ಯಾವ ಎಲ್ಲೆಗೆ ಮುಟ್ಟಿತ್ತೆಂಬುದನ್ನು ತೋರಿಸುವುದಕ್ಕೆ ಇಂಥ ನಿದರ್ಶನ ಬೇರೆ ಯಾವುದುಂಟು?— ಈ ಮುದುಕನನ್ನು ಕರ್ಣನು ಹಾಸ್ಯಮಾಡಿದ್ದು ಏನಾಶ್ಚರ್ಯ! ಆದರೆ, ಮುಪ್ಪು ಕವಿದರೂ ಸಗ್ಗದೆ ಉಕ್ಕುತಿದ್ದ ಭೀಷ್ಮನ ಶೌರ್ಯವನ್ನೂ ನೋಡಿ. ಪ್ರಚಂಡಕೋದಂಡವನ್ನು ಹಿಡಿದು ತನ್ನ ಗುರುವಿನ ಹೆಸರನ್ನು ಘೋಷಿಸಿ ಶತ್ರುಗಳಿಗೆ ಎದುರಾಗಿ ನಿಲ್ಲುವಾಗ ಅವನ ಹುರುಪನ್ನು ಯಾವ ತರುಣನು ತಾನೆ ಸರಿಗಟ್ಟಬಹುದು!

ಕೊನೆಯದಾಗಿ, ಒಂದು ಕಥಾಪ್ರಸಂಗವನ್ನೇ ಪಂಪನು ಹೇಗೆ ಅಡಕವಾಗಿ ಹೇಳಬಲ್ಲನೆಂಬುದಕ್ಕೆ ಒಂದು ನಿದರ್ಶನ: ಶಂತನುಮಹಾರಾಜನು ಬೇಟೆಗೆಂದು ಹೋಗಿ ಅಲೆಯುತ್ತಿದ್ದಾಗ ತನಗೆ ಸೋಕಿದ ಸತ್ಯವತಿಯ ದೇಹಪರಿಮಳಕ್ಕೆ ದುಂಬಿಯಂತೆ ಸೋತು, ಅವಳನ್ನು ಕಂಡು ಮೋಹಿಸಿದ ಸಂದರ್ಭವನ್ನು ಪಂಪನು ಈ ಪದ್ಯದಲ್ಲಿ ಸಂಗ್ರಹಿಸಿದ್ದಾನೆ:

ಮೃಗಯಾವ್ಯಾಜದಿನೊರ್ಮೆ ಶಂತನು ತೊಳಲ್ತರ್ಪಂ ಪಳಂಚಲ್ಕೆ ತ-
ನ್ಮೃಗಶಾಬಾಕ್ಷಿಯ ಕಂಪು ತಟ್ಟೆ ಮಧುಪಂಬೊಲ್ ಸೋಲ್ತು ಕಂಡೊಲ್ದು ನ-
ಲ್ಕೈಗೆ ದಿಬ್ಯಂಬಿಡಿವಂತೆವೋಲ್ ಪಿಡಿದು, 'ನೀಂ ಬಾ ಪೋಪಂ-' ಎಂದಂಗೆ ಮೆ-
ಲ್ಲಗೆ ತತ್ಕನ್ಯಕೆ ನಾಣ್ಚಿ, 'ಬೇಡುವೊಡೆ ನೀವೆಮ್ಮಯ್ಯನಂ ಬೇಡಿರೇ'—

ಎಂದಳಂತೆ. ಶಂತನು ಸತ್ಯವತಿಯ ಕೈಯನ್ನು "ತನ್ನ ಒಲುಮೆ ಸತ್ಯವೆಂದು ದೃಢಪಡಿಸಲು ದಿವ್ಯಪ್ರಮಾಣವನ್ನು ಹಿಡಿಯು

ವಂತೆ” ಹಿಡಿದನೆಂಬ ಉತ್ಪ್ರೇಕ್ಷೆಯನ್ನೂ, ಒಂದೊಂದೇ ವಾಕ್ಯದಲ್ಲಿ ಗಂಡಿನ ಆತುರವೂ ಹೆಣ್ಣಿನ ನಾಚಿಕೆಯೂ ಹೊರಪಟ್ಟಿರುವುದನ್ನೂ ಇಲ್ಲಿ ಗಮನಿಸಬಹುದು.

ತನ್ನ ಕಾವ್ಯಶೈಲಿಯ ತಿರುಳು ಏನೆಂಬುದನ್ನು ಪಂಪನೇ ಅರಿತಿದ್ದನು. ‘ ಹಿತಮಿತಮೃದು ವಚನ ’, ‘ ಪ್ರಸನ್ನ ಗಂಭೀರ ವಚನ ರಚನಚತುರ ’ ಎಂದು ತನ್ನನ್ನು ಬೇರೆಬೇರೆ ಕಡೆಗಳಲ್ಲಿ ವರ್ಣಿಸಿಕೊಂಡಿರುವುದಲ್ಲದೆ, ‘ ...ಕೋಮಲಂ...ಸೂಕ್ತಿಗರ್ಭಂ ಮೃದುಸಂದರ್ಭಂ ವಿಚಾರಕ್ಷಮಂ ಉಚಿತಪದಂ ಶ್ರವ್ಯಂ . . .’ ಎಂದು ಮೊದಲಾಗಿ ತನ್ನ ಕಾವ್ಯದ ಗುಣಗಳನ್ನೂ ನಿರೂಪಿಸಿದ್ದಾನೆ. ಪಂಪನ ಕವಿತೆಯ ರೀತಿಯನ್ನು ಪರಿಶೀಲಿಸತಕ್ಕವರು ಈ ವಿಶೇಷಣಗಳಿಗೆಲ್ಲ ವ್ಯಾಖ್ಯಾನಮಾಡಿದರೆ ಸಾಕು.

---

## ೫. ಪ್ರಶಸ್ತಿ

ಮಹಾಕವಿಪಟ್ಟವು ಒಬ್ಬನಿಗೆ ಬರುವುದು ಆವನ ಪ್ರತಿಭೆಯ ಮಹಿಮೆಯಿಂದ. ಈ ಪ್ರತಿಭೆ ಯಾರಲ್ಲಿ ಯಾವಾಗ ಬೆಳಗುವುದೆಂಬುದನ್ನು ಒಂದು ಸಾಹಿತ್ಯದ ಜಾತಕದಲ್ಲಿ ಗುಣಿಸಿ ಹೇಳುವವರು ಇನ್ನೂ ಹುಟ್ಟಿಲ್ಲ. ಪ್ರತಿಭಾಶಾಲಿಯಾಗುವುದಕ್ಕೆ ಕವಿಗೆ ಪುಣ್ಯ ಬೇಕು; ಅಂಥ ಕವಿಯನ್ನು ಪಡೆಯುವುದಕ್ಕೆ ಆವನ ಜನತೆಗೂ ಪುಣ್ಯ ಬೇಕು. ಅಷ್ಟೇ.

ಈ ಬಗೆಯ ಪ್ರತಿಭಾಶಾಲಿ ಅವತರಿಸಿದಾಗ ಸನ್ನಿವೇಶ ಸಲಕರಣೆಗಳು ಹದವಾಗಿದ್ದರೆ ಆವನ ಶಕ್ತಿ ಬೇಗ ಪಾಕಹೊಂದುತ್ತದೆ; ಉತ್ತಮಫಲವನ್ನು ಕೊಡುತ್ತದೆ. ಪಂಪನು ಹುಟ್ಟುವುದಕ್ಕೆ ನೂರಾರು ವರ್ಷಗಳಿಗೆ ಹಿಂದೆಯೇ ಕನ್ನಡ ಕಾವ್ಯರಚನೆಗೆ ಮೊದಲಾಗಿತ್ತು. ಗದ್ಯದಲ್ಲಿ ಬರೆದಿದ್ದರು, ಪದ್ಯದಲ್ಲಿ ಬರೆದಿ

ದ್ದರು, ಶಾಸನಗಳನ್ನು ಕೊರೆದಿದ್ದರು. ಕವಿಗಳಿಗೆ ಮಾರ್ಗ ತೋರಿಸಲು ರಾಷ್ಟ್ರಕೂಟಚಕ್ರವರ್ತಿ ನೃಪತುಂಗನ ಹೆಸರಿನಲ್ಲಿ ಒಂದು ಅಲಂಕಾರಗ್ರಂಥ ಬಂದಿತ್ತು; ಗುಣಗಾಂಕನೆಂಬ ಬಿರುದು ಹೊಂದಿದ್ದ ಮೂಡಣ ಚಾಳುಕ್ಯರಾಜನೊಬ್ಬನಿಗೆ ಅಂಕಿತವಾಗಿ ಛಂದಶ್ಶಾಸ್ತ್ರದಮೇಲೂ ಒಂದು ಗ್ರಂಥ ಹುಟ್ಟಿತ್ತು. ಪುಲಿಗೆಱೆಯ ಪ್ರಾಂತದಲ್ಲಿ ಬಳಕೆಯಲ್ಲಿದ್ದ ಮಾತಿಗೆ ಕನ್ನಡದ ತಿರುಳೆಂಬ ಹೆಸರಿನ ರಾಜಮುದ್ರೆ ಬಿದ್ದಿತ್ತು. ಹೀಗೆ, ಪಂಪನ ಬೆರಳು ಮಿಾಟಿದಾಗ ಇಂಪಾದ ನಾದವನ್ನು ಕೊಡುವುದಕ್ಕೆ ಕನ್ನಡದ ವೀಣೆ ಶ್ರುತಿಮಾಡಿ ಸಿದ್ಧವಾಗಿತ್ತು.

ಮಹಾಕವಿಯಾಗುವುದಕ್ಕೆ ಪಂಪನೂ ಸಿದ್ಧತೆಯನ್ನು ಪಡೆದನು. ಸಂಸ್ಕೃತದ ವಿಸ್ತಾರವಾದ ಸಾಹಿತ್ಯವನ್ನು ಶ್ರದ್ಧೆಯಿಂದ ಓದಿ ಮನಸ್ಸಂಸ್ಕಾರವನ್ನೂ ಮೇಲ್ಪಂಕ್ತಿಯನ್ನೂ ಗಳಿಸಿಕೊಂಡನು. ಇದಕ್ಕಿಂತ ಹೆಚ್ಚಾಗಿ, ದೇಶದ ಮೇಲೆಲ್ಲಾ ಸಂಚರಿಸಿ, ರಾಜಾಸ್ಥಾನದಲ್ಲಿ ನೆಲಸಿ, ಅನೇಕ ಮುಖವಾದ ಬದುಕನ್ನು ಬಾಳಿ, ಅನುಭವವನ್ನು ವಿಶಾಲಪಡಿಸಿಕೊಂಡನು. ಅವನ ಜೀವನದ ಸಾರವಾಗಿ ಹೊಮ್ಮಿದ ಆದಿಪುರಾಣವೂ ವಿಕ್ರಮಾರ್ಜುನವಿಜಯವೂ 'ಮುನ್ನಿನ ಕಬ್ಬಮನೆಲ್ಲಮನ್-ಇಕ್ಕಿ ಮೆಟ್ಟಿದುವು' ಎಂದರೆ ಏನಾಶ್ಚರ್ಯ?

ಪಂಪನ ಕೃತಿಗಳು ಹೊರಬಿದ್ದ ಬಳಿಕ, ಕನ್ನಡ ಸಾಹಿತ್ಯದಲ್ಲಿ ಒಂದು ಹೊಸಯುಗವೇ ಮೊದಲಾಯಿತು. ಅಲ್ಲಿಂದೀಚೆಗೆ ಚಂಪೂಧಾಟಿಯಲ್ಲಿ ಕಾವ್ಯ ಬರೆದವರಿಗೆಲ್ಲ, ಅವರು ಜೈನರಾಗಿರಲಿ ಅಲ್ಲದಿರಲಿ, ಪಂಪನ ಕಾವ್ಯಗಳೇ ಆದರ್ಶ. ಕನ್ನಡ ಸಾಹಿತ್ಯದ ಈ ನಂದಾದೀವಿಗೆಯಿಂದ ಎಷ್ಟುಮಂದಿ ದೊಡ್ಡ ಕವಿಗಳು ತಮ್ಮ ಕಾವ್ಯದ ಸೊಡರುಗಳನ್ನು ಹೊತ್ತಿಸಿಕೊಂಡಿಲ್ಲ! ಗದಾಯುದ್ಧದ ರನ್ನ, 'ಅಭಿನವಪಂಪ' ನಾಗಚಂದ್ರ—ಹೀಗೆ

ಹೆಸರು ಹೇಳಿದರೆ ಸಾಕು. ಇನ್ನೆಷ್ಟೋ ಮುಂದಿ ಕವಿಗಳಲ್ಲಿ ಒಬ್ಬನು ಪಂಪನ ರಸವನ್ನು, ಮತ್ತೊಬ್ಬನು ರೀತಿಯನ್ನು, ಇನ್ನೊಬ್ಬನು ಇಂಪನ್ನು,—ಹೀಗೆ ತಮ್ಮ ತಮ್ಮ ರುಚಿಗೆ ಅನುಸಾರವಾಗಿ ಮೆಚ್ಚಿದ್ದಾರೆ, ಬಯಸಿದ್ದಾರೆ. ಪಂಪನು 'ಆದಿಕವಿ'ಯೆಂಬು ಮಧುರನ ಹೇಳಿಕೆ; ಹೊಸಯುಗದ ಶಕಪುರುಷನೆಂಬ ಅರ್ಥವನ್ನು ಇಟ್ಟುಕೊಂಡರೆ ಪಂಪನು ಆದಿ ಕವಿಯೂ ಆಗುತ್ತಾನೆ. 'ಅಗ್ರಕವಿ'ಯಂತೂ ಉದ್ದಕ್ಕೂ ಆಗಿಯೇ ಇದ್ದಾನೆ.

ಪಂಪನನ್ನು ನೆನೆದಾಗಲೆಲ್ಲ ಸಂಸ್ಕೃತ ಕವಿಯೊಬ್ಬನ ನೆನಪು ತಪ್ಪದೆ ಆಗುತ್ತದೆ—ಆತನು ಕಾಳಿದಾಸ. ಕಾಳಿದಾಸನು ಸಂಸ್ಕೃತದಲ್ಲಿ ಅಗ್ರಕವಿ, ಕವಿಗಳ ಕವಿ—ಎಂದಿಷ್ಟು ಮಾತ್ರವೇ ಈ ಹೋಲಿಕೆ ಹೊಳೆಯುವುದಕ್ಕೆ ಕಾರಣವಲ್ಲ. ಮಹತ್ತ್ವವಷ್ಟೇ ಅಲ್ಲದೆ ಮನೋಧರ್ಮದಲ್ಲಿಯೂ ಇಬ್ಬರಿಗೂ ಸಾದೃಶ್ಯವಿದೆ. ಕಾಳಿದಾಸ, ಪಂಪ: ಇಬ್ಬರೂ ರಾಜಾಸ್ಥಾನದಲ್ಲಿ ಗೌರವಕ್ಕೆ ಪಾತ್ರರಾಗಿ, ನಾಗರಿಕರಲ್ಲಿ ನಾಗರಿಕರಾಗಿ ಬಾಳಿದವರು; ಇಬ್ಬರೂ ರಸಿಕರು—ಭೋಗವನ್ನು ನಿರಾಕರಿಸದೆ, ಅಲ್ಪಮಾರ್ಗಕ್ಕೆ ಇಳಿಯದೆ ತುಂಬುಜೀವನವನ್ನು ಬಾಳಿದವರು; ಸುಖದಲ್ಲಿ ಮುಳುಗಿದಾಗಲೂ ಬದುಕಿನ ಕೊನೆಯ ಗುರಿಯನ್ನು ಮರೆಯದವರು. ಕವಿತಾಮಾರ್ಗದಲ್ಲೂ ಅಷ್ಟೇ: ಪ್ರಸನ್ನ ಗಂಭೀರವಾಣಿಯಲ್ಲಿ ಸೂಕ್ಷ್ಮವಾದ ನೋಟವನ್ನು, ಅನುಭವದ ಸಾರವನ್ನು ನಿರೂಪಿಸಬಲ್ಲವರು. ಇವರಿಬ್ಬರಲ್ಲಿ ಹಿರಿಯವನು ಕಾಳಿದಾಸ—ಕಾಲದಲ್ಲಿ ಮಾತ್ರವಲ್ಲ, ಪ್ರತಿಭೆಯಲ್ಲಿ ಕೂಡ. ಇದನ್ನೊಪ್ಪಿಕೊಂಡು, ಧೈರ್ಯವಾಗಿ ಈ ಮಾತನ್ನು ಹೇಳಬಹುದು: ಪಂಪನು ಕನ್ನಡದ ಕಾಳಿದಾಸ.